ಡಾ॥ ಎಂ.ಎಸ್. ವಾಲಿಯವರ

# "ಜಾನಪದ ಸಂಶೋಧನೆ"

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ನಿಬಂಧ)

ಸಂಶೋಧಕರು

ಮಹಾದೇವಿ ಸಿದ್ದಪ್ಪ ಕಮತಿ

ಮಾರ್ಗದರ್ಶಕರು

ಡಾ || ಆರ್.ಜಿ. [illegible]
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ
ಹಾರೂಗೇರಿ – ೫೯೧ ೨೨೦.
ತಾ : ರಾಯಬಾಗ ಜಿ : ಬೆಳಗಾವಿ



ಶ್ರೀ ಬಿ.ಆರ್. ದರೂರ. ಸಂಶೋಧನಾ ಕೇಂದ್ರ
ಹಾರೂಗೇರಿ – ೫೯೧ ೨೨೦
ತಾ : ರಾಯಬಾಗ ಜಿ : ಬೆಳಗಾವಿ

೨೦೦೯

ಡಾ॥ ಎಂ.ಎನ್. ವಾಲಿಯವರ

# "ಜಾನಪದ ಸಂಶೋಧನೆ"

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)

ಸಂಶೋಧಕರು

**ಮಹಾದೇವಿ ಸಿದ್ದಪ್ಪ ಕಮತಿ**





ಮಾರ್ಗದರ್ಶಕರು

**ಡಾ ॥ ಆರ್.ಜಿ. ಜಿಲಬಿ**

ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ

ಹಾರೂಗೇರಿ – ೫೯೧ ೨೨೦

ತಾ : ರಾಯಬಾಗ ಜಿ : ಬೆಳಗಾವಿ



ಶ್ರೀ ಬಿ.ಆರ್. ದರೂರ, ಸಂಶೋಧನಾ ಕೇಂದ್ರ

ಹಾರೂಗೇರಿ – ೫೯೧ ೨೨೦

ತಾ : ರಾಯಬಾಗ ಜಿ : ಬೆಳಗಾವಿ

೨೦೦೯

# <u>ದೃಢೀಕರಣ ಪತ್ರ</u>

ಮಹಾದೇವಿ. ಸಿದ್ದಪ್ಪ. ಕಮತಿ. ಇವರು **"ಡಾ. ಎಂ.ಎಸ್. ವಾಲಿಯವರ ಜಾನಪದ ಸಂಶೋಧನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ನಿಬಂಧ ಸಲ್ಲಿಸಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿಲ್ಲ. ಇದು ಈ ಮೊದಲು ಇಡಿಯಾಗಿಯಾಗಲಿ ಅಥವಾ ಬಿಡಿ-ಬಿಡಿಯಾಗಿಯಾಗಲೀ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೨೬-೯-೨೦೦೬

**ಡಾ.ಆರ್.ಬಿ. ಚಿಲಮಿ**
**ಮಾರ್ಗದರ್ಶಕರು**
**ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,**
**ಹಾರೂಗೇರಿ, ಜಿ : ಬೆಳಗಾವಿ**
**(ಸಂಯೋಜನೆ ಕನ್ನಡ ವಿಶ್ವವಿದ್ಯಾಲಯ ಹಂಪಿ)**

# ಪ್ರಮಾಣ ಪತ್ರ

"ಡಾ. ಎಂ.ಎನ್. ವಾಲಿಯವರ ಜಾನಪದ ಸಂಶೋಧನೆ" ಎಂಬ ನಿಬಂಧವನ್ನು ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿರುವೆ. ಪ್ರಸ್ತುತ ನಿಬಂಧವು ಡಾ॥ ಬಿ.ಆರ್. ಚಿಲಮಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿಲ್ಲ. ಇದನ್ನು ಬಿಡಿ-ಬಿಡಿಯಾಗಿ ಇಲ್ಲವೇ ಇಡಿಯಾಗಿ ಆಗಲೀ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ ೨೬-೯-೨೦೦೯

(ಮಹಾದೇವ ಸಿದ್ದಪ್ಪ ಕಮತಿ)
ಸಂಶೋಧನಾ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ, ಜಿ : ಬೆಳಗಾವಿ

## ಅಧ್ಯಯನದ ವಿನ್ಯಾಸ



## ಅನುಬಂಧಗಳು

## ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಮಾನವ ಸಂಸ್ಕೃತಿಯನ್ನು ಅಧ್ಯಯನ ನಡೆಸುವ ಶಾಸ್ತ್ರಗಳಲ್ಲಿ ಜಾನಪದ ಪ್ರಮುಖ ಪಾತ್ರವಹಿಸುತ್ತದೆ. ಸಾಮಾನ್ಯವಾಗಿ ಸಂಸ್ಕೃತಿಯನ್ನು ಎರಡು ರೀತಿಯಲ್ಲಿ ಗುರುತಿಸಲಾಗುತ್ತದೆ. ಒಂದು ಜಾನಪದ ಸಂಸ್ಕೃತಿ ಮತ್ತೊಂದು ಶಿಷ್ಟ ಸಂಸ್ಕೃತಿ. ಮಾನವಶಾಸ್ತ್ರ ಸಮಗ್ರ ಸಂಸ್ಕೃತಿಯನ್ನು ಅಧ್ಯಯನ ಮಾಡುತ್ತಾ ಹೋದಂತೆ ಜಾನಪದ ಪರಂಪರಾಗತ ವಿಷಯಗಳನ್ನು ಪ್ರತ್ಯೇಕಿಸಿಕೊಂಡು ತನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ. ಸಹಸ್ರಾರು ವರ್ಷಗಳ ಮಾನವ ಜೀವನ ಚರಿತ್ರೆಯ ಬೆಳಗಣಿಗೆಯ ಯಾತ್ರೆಯಲ್ಲಿ ಒಂದು ಕಾಲಕ್ಕೆ ಜೀವನದ ಸಮಸ್ತ ವ್ಯಾಪಾರವೂ ಕಂಠಸ್ಥ ಸಂಸ್ಕೃತಿಯ ಮೂಲಕವೇ ತಲೆಮಾರಿನಿಂದ ತಲೆಮಾರಿಗೆ ಸಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಕಂಠಸ್ಥ ಸಂಸ್ಕೃತಿ ಶಿಷ್ಟ ಸಂಸ್ಕೃತಿಯ ಉದಯದಿಂದ ಮುಕ್ಕಾಗಲಿಲ್ಲ. ಅದು ತನಗೆ ಅನುಕೂಲವಾದ ಪರಿಸರದಲ್ಲಿ ಉಳಿದುಕೊಂಡೇ ಬಂದಿತು. ಇದನ್ನೇ ಅಧ್ಯಯನಕಾರರು ವಿದ್ವಾಂಸರು ಜಾನಪದ ಎಂದು ಕರೆದರು. ಇದರ ಮಹತ್ವವನ್ನು ಅರಿತು ವಿದ್ವಾಂಸರು ಜಾನಪದವನ್ನು ಶಿಷ್ಟ ಸಂಸ್ಕೃತಿಯಿಂದ ಪ್ರತ್ಯೇಕಿಸಿಕೊಂಡು ಅಧ್ಯಯನ ಮಾಡತೊಡಗಿದರು.

೧೯ ನೆಯ ಶತಮಾನದ ಮಧ್ಯಭಾಗದಲ್ಲಿ ಥಾಮ್ಸನ್‌ನಿಂದ Folklore ಶಬ್ದ ಸೃಷ್ಟಿಯಾದ ಮೇಲೆ ಅದರ ವಿವರಣಾ ವ್ಯಾಪ್ತಿಗೆ ವಿದ್ವಾಂಸರು ಪ್ರಯತ್ನಿಸಿದರು. Folk- ಅಗಮ್ಯ + lore- ಸಂಗ್ರಹ = Folklore ಅಂದರೆ 'ಅಗಮ್ಯ ಸಂಗ್ರಹವೇ ಜನಪದವಾಗಿದೆ'[೧]. ಇದರಂತೆ ಜಾನಪದದ ಬಗೆಗೆ ಕೆಲವು ವಿದ್ವಾಂಸರು ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ. ಎಡ್ವಿನ್ ಸಿಡ್ನಿ ಹಾರ್ಟ್ಲ್ಯಾಂಡ್ ಪ್ರಕಾರ 'ಜೀವನದ ರೀತಿ ನೀತಿಗಳು ಸಂಪ್ರದಾಯ ನಂಬಿಕೆಗಳು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿ ಬರುತ್ತವೆ'.[೨] ಇ.ಡಬ್ಲ್ಯೂ ವ್ಹೇಯ್ಗಲಿನ್ "ಮೌಖಿಕ ಸಂಪ್ರದಾಯದಲ್ಲಿ ಸಾಗಿ ಬಂದ ಯಾವುದೇ ಪರಂಪರಾಗತ ವಿಷಯವಾಗಿರಲಿ. ಸಾಂಪ್ರದಾಯಿಕ ಗದ್ಯ ಪದ್ಯವಾಗಿರಲಿ. ಅದು ಜಾನಪದ" ಎಂದಿದ್ದಾರೆ. ಜಿ.ಎ. ಬಾಟ್ಕಿನ್ "In a purely oral culture everything is folklore" ಎಂದು ಹೇಳಿದ್ದಾರೆ. ಹೀಗೆ ಹತ್ತು ಹಲವಾರು ವ್ಯಾಖ್ಯಾನಗಳನ್ನು ಕಾಣುತ್ತೇವೆ. ಹೀಗೆ ಇವರೆಲ್ಲರ ವ್ಯಾಖ್ಯೆಗಳನ್ನು ಗಮನಿಸಿದಾಗ ಜಾನಪದದ ಅಧ್ಯಯನ ಇಂದಿಗೂ ಅಗತ್ಯವಾಗಿದೆ.

---

೧. ಕನ್ನಡ ಸಾಹಿತ್ಯ ಕೋಶ : ಸಂಪಾದಕರು : ರಾಜಪ್ಪ ದಳವಾಯಿ ಪು.ಸಂ. ೫೫ ಪ್ರ. ೫ ನೇ ಮುದ್ರಣ ೨೦೦೬

೨. ಜಾನಪದ ಸ್ವರೂಪ ಮತ್ತು ಸಾಹಿತ್ಯ : ಪ್ರೊ. ಡಿ. ಲಿಂಗಯ್ಯ, ಡಾ ॥ ಕೆ.ಆರ್. ಸಂಧ್ಯಾರೆಡ್ಡಿ ಪು. ೫ ಪ್ರ.ವ. ೧೯೯೭

ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡುವ ಜಾನಪದದ ವರ್ಗೀಕರಣ ಅಗತ್ಯವಾಗಿದೆ. ಜಾನಪದದ ಮೂಲ ಕ್ರಿಯೆ ಸಂಗ್ರಹ ಕಾರ್ಯ ವಿವಿಧ ಭೌಗೋಳಿಕ ಹಾಗೂ ಭಾಷಿಕ ಭಾಗಗಳಲ್ಲಿ ನಡೆದು ಅನಂತರ ವರ್ಗೀಕರಣ ನಡೆಯುತ್ತದೆ. ವರ್ಗೀಕರಣಗೊಂಡ ಜಾನಪದ ಪ್ರಕಾರಗಳನ್ನು ಅದರ ಸಾಹಿತ್ಯಕ, ಸಾಂಸ್ಕೃತಿಕ ಹಾಗೂ ಇತರ ಮೌಲ್ಯಗಳಿಗಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಈ ಮೂರು ಹಂತಗಳಲ್ಲಿ ವರ್ಗೀಕರಣ ಪಾತ್ರ ಅಗತ್ಯವಾದುದಾಗಿದೆ. ಉದಾಹರಣೆಗೆ

೧) ಪುರಾಣಗಳು, ಐತಿಹ್ಯಗಳು ಜಾನಪದ ಕಥೆಗಳು, ವಿನೋದಗಳು, ಗಾದೆಗಳು, ಒಗಟುಗಳು, ಸೂತ್ರ ಬದ್ಧ ನುಡಿಗಳು, ಆಶೀರ್ವಚನಗಳು, ಶಾಪಗಳು, ಪ್ರಮಾಣ ವಚನಗಳು ಇತ್ಯಾದಿ.

೨) ಕೊಡುಗೆ, ಜನಪದ ನೃತ್ಯ, ಜನಪದ ನಾಟಕ, ಜನಪದ ಕಲೆ, ಜನಪದ ನಂಬಿಕೆ, ಜನಪದ ವೈದ್ಯ, ಜನಪದ ಸಂಗೀತ ವಾದ್ಯ, ಲಾವಣಿಗಳು, ಜನಪದ ಗೀತೆಗಳು, ಜನಪದ ಭಾಷೆ, ಕಾವ್ಯ, ಅಲಂಕಾರ ಮುಂತಾದವು.

೩) ಕ್ರೀಡೆಗಳು, ಸಂಜ್ಞೆಗಳು, ಸಂಕೇತಗಳು, ಪ್ರಾರ್ಥನೆಗಳು, ವಾಸ್ತವಿಕ ವಿನೋದಗಳು ಆಹಾರ ಬಗೆಗಳು, ಕೌದಿ ಮತ್ತು ಕಸೂತಿ ಚಿತ್ರಗಳು, ಪ್ರಾಣಿ ನಿಯಂತ್ರಣ ಶಬ್ದಗಳು, ಹೀಗೆ ಇವು ಪ್ರಾದೇಶಿಕ ಹಿನ್ನೆಲೆಯಲ್ಲಿ ರೂಪುಗೊಂಡಾಗ ಇವುಗಳ ಅಧ್ಯಯನ ಸಮಗ್ರ ಎನಿಸುತ್ತದೆ.

**ಉದ್ದೇಶ :**

ಕರ್ನಾಟಕದ ಮಟ್ಟಿಗೆ ಸಾಕಷ್ಟು ಪ್ರಮಾಣದಲ್ಲಿ ಜನಪದ ಸಂಸ್ಕೃತಿಯನ್ನು ದಾಖಲಿಸುವ ನಿಟ್ಟಿನಲ್ಲಿ ಅನೇಕ ವಿದ್ವಾಂಸರು ಕಾರ್ಯ ಕೈಗೊಂಡಿದ್ದಾರೆ. ಉದಾ : ಮಧುರಚೆನ್ನರು, ಸಿಂಪಿ ಲಿಂಗಣ್ಣ, ಕಾಪಸೆ ರೇವಪ್ಪ, ಡಾ.ಗದ್ದಗಿಮಠ, ಬೆಟಗೇರಿ ಕೃಷ್ಣಶರ್ಮ, ಗೊ. ರು. ರಾಮಸ್ವಾಮಿ ಅಯ್ಯಂಗಾರ, ಎಂ.ಎಸ್. ಸುಂಕಾಪೂರ, ದೇವುಡು, ಬಿ.ಎ. ವಿವೇಕ ರೈ, ಜೀ.ಶಂ. ಪರಮಶಿವಯ್ಯ, ಹಾ.ಮಾ. ನಾಯಕ, ಎಚ್.ಎಲ್. ನಾಗೇಗೌಡ, ಚಂದ್ರಶೇಖರ ಕಂಬಾರ ಮುಂತಾದವರು. ಇವರೆಲ್ಲ ಗ್ರಾಮೀಣ ಸಂಸ್ಕೃತಿಯನ್ನು ಸಾಹಿತ್ಯಿಕವಾಗಿ ಉಳಿಸಿ, ಬೆಳೆಸಲು ಮುಂದಾದವರು. ಇವರೆಲ್ಲರೂ ಸಂಗ್ರಹ ಸಂಪಾದನೆ, ಮಾಡುವ ಜಾನಪದ ಚಿಂತಕರೆನಿಸಿಕೊಂಡಿದ್ದಾರೆ. ಇಂತಹ ಚಿಂತಕರ ಸಾಲಿಗೆ ಸೇರ್ಪಡೆಯಾಗುತ್ತಿರುವ ವ್ಯಕ್ತಿತ್ವ ಡಾ. ಎಂ.ಎಸ್. ವಾಲಿಯವರು. ನಶಿಸಿ ಹೋಗುತ್ತಿರುವ ಜಾನಪದ ಮೌಲ್ಯವನ್ನು ಸಂಪಾದಿಸಿ ಪರಿಚಯಿಸುವ ಪ್ರಕಟಿಸುವ ಕಾರ್ಯವನ್ನು ಮಾಡುತ್ತಿರುವುದು ಸ್ತುತ್ಯಾರ್ಹವಾಗಿದೆ. ಈ ಸಾಹಿತ್ಯ

ಶಿಷ್ಟ ಸಾಹಿತ್ಯ ನಿರ್ಮಾಣಕ್ಕೆ ಪೂರಕವೂ ಆಗಿದೆ ಎಂಬ ಕಾರಣಕ್ಕೆ ಜಾನಪದದ ಅಧ್ಯಯನ ಅಗತ್ಯವೆನಿಸಿದೆ.

ಡಾ. ಎಂ.ಎನ್. ವಾಲಿಯವರು ಜಾನಪದ ಬದುಕು ಬಾಳಿದ ವ್ಯಕ್ತಿತ್ವ, ಅವರ ಲೇಖನ, ಸಂಪಾದನೆ ಕುರಿತು, ವಸ್ತುನಿಷ್ಠ, ವಿಷಯನಿಷ್ಠ, ಅಧ್ಯಯನ ಕೈಗೊಳ್ಳುವುದು ಈ ಪ್ರಬಂಧದ ಉದ್ದೇಶವಾಗಿದೆ. ಬಿಜಾಪೂರ ಜಿಲ್ಲೆಯಲ್ಲಿ ಹಲಸಂಗಿ ಚನ್ನಮಲ್ಲಪ್ಪ ಸಿಂಪಿ ಲಿಂಗಣ್ಣನವರ ನಂತರ, ಅದೇ ಮಾರ್ಗದಲ್ಲಿ ಜಾನಪದ ಕ್ಷೇತ್ರದಲ್ಲಿ ವಾಲಿಯವರು ಅಧ್ಯಯನ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಈ ನಿಟ್ಟಿನಲ್ಲಿ ಜನಪದ ಸಾಹಿತ್ಯಕ್ಕೆ ಅಪಾರವಾದ ಸೇವೆ ಸಲ್ಲಿಸಿದ ಮತ್ತು ಜನಪದ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಲೇಖಕರ ಬದುಕು ಬರಹಗಳನ್ನು ಸಮಗ್ರವಾಗಿ ಅಭ್ಯಸಿಸುವದರಿಂದ ಅವರ ಕೊಡುಗೆಗೆ ಬೆಲೆ ಕಟ್ಟುವುದು, ಸಮಾಜದಲ್ಲಿ ಅವರ ಸ್ಥಾನಮಾನವನ್ನು ಗುರುತಿಸುವುದು, ಇತರ ಕೃತಿಗಳೊಡನೆ ಹೋಲಿಸಿ ನೋಡುವುದು ವಿಮರ್ಶಿಸುವುದು ಮೊದಲಾದ ವಿವಿಧ ರೀತಿಯ ಅಧ್ಯಯನದಿಂದ ಸಂಪಾದನೆಯ, ಕೃತಿ ರಚನೆಯ, ಗಾಂಭೀರ್ಯತೆಯು ಹೆಚ್ಚುತ್ತದೆ. ಜಾನಪದ ಸಾಹಿತ್ಯರಾಶಿಗೆ ವಾಲಿ ಅವರ ಕೊಡುಗೆಯೇನು, ಮತ್ತು ಮರೆತು ಹೋಗಬಹುದಾದ ಸಾಹಿತ್ಯವನ್ನು ಎತ್ತಿ ತೋರಿಸಿ ಜನತೆಯ ಮುಂದಿಟ್ಟು ಅವರಿಗೆ ಸ್ಫೂರ್ತಿಯನ್ನೂ, ಅಭಿಮಾನವನ್ನೂ, ಜ್ಞಾನವನ್ನೂ ತುಂಬುತ್ತಿರುವ ಅವರ ಪ್ರಯತ್ನವನ್ನು ನೆನಪಿಸಿ ವಿವರವಾಗಿ ಅಧ್ಯಯನ ಮಾಡುವುದು ಈ ಪ್ರಬಂಧದ ಮತ್ತೊಂದು ಉದ್ದೇಶವಾಗಿದೆ.

ಕನ್ನಡಾಭಿಮಾನ ಕನ್ನಡ ಹೋರಾಟಗಾರ ಎನಿಸಿಕೊಂಡ ವಾಲಿಯವರು ೧೯೮೨ ರ ಎಪ್ರಿಲ್‌ದಲ್ಲಿ ಗೋಕಾಕ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗಿಯಾಗಿ ಸೆರೆಮನೆ ಶಿಕ್ಷೆಗೆ ಒಳಗಾದರು. ಈ ಮೂಲಕ ನಾಡು ನುಡಿಯ ಅಭಿಮಾನದ ಪ್ರತೀಕವಾಗಿ ಜನಸಾಮಾನ್ಯರ ಪ್ರೀತಿಗೆ ಪಾತ್ರರಾದರು. ತನ್ಮೂಲಕ ಜನ ಸಾಮಾನ್ಯ ಸಾಹಿತ್ಯದ ಹುಡುಕಾಟದಲ್ಲಿ ತೊಡಗಿದರು. ಪ್ರಾಥಮಿಕ, ಪ್ರೌಢ ಉನ್ನತ ಶಿಕ್ಷಣ ಪಡೆದರು. ಪ್ರಾರಂಭದಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕ ವೃತ್ತಿಯನ್ನು ಆಯ್ಕೆ ಮಾಡಿಕೊಂಡು ಶಿಕ್ಷಕರಾಗಿ, ಪ್ರಾಧ್ಯಾಪಕರಾಗಿ, ಸೇವೆ ಸಲ್ಲಿಸಿದರು. ನಿವೃತ್ತಿಯ ನಂತರವೂ ತಮ್ಮನ್ನು ತಾವು ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ನಡೆ ನುಡಿಗಳಲ್ಲಿ ಸಮನ್ವಯವನ್ನು ಕಂಡುಕೊಂಡು ಜನಪದ ಬದುಕು ಬಾಳಿದ, ಸರಳ ನೇರ ಸ್ವಭಾವದ ವ್ಯಕ್ತಿತ್ವ ಡಾ.ಎಂ.ಎನ್. ವಾಲಿಯವರದು. ಈ ಕಾರಣಗಳಿಂದ ಅವರ ಬದುಕು, ಬರಹ, ಚಿಂತನ ಮಂಥನದ ಕುರಿತಾದ ಅಧ್ಯಯನದ ಅಗತ್ಯವನ್ನು ಕಂಡುಕೊಂಡು ಪ್ರಬಂಧ ರಚಿಸಲು ಪ್ರಯತ್ನಿಸಲಾಗಿದೆ.

**ಸ್ವರೂಪ**

ಪ್ರಸ್ತುತ ಪ್ರಬಂಧವು ಆರು ಅಧ್ಯಾಯಗಳನ್ನು ಮತ್ತು ಅನುಬಂಧಗಳನ್ನು ಒಳಗೊಂಡಿದೆ ಮೊದಲನೇ ಅಧ್ಯಾಯದಲ್ಲಿ ಜಾನಪದ ಸಾಹಿತ್ಯದ ಮಹತ್ವ, ಉದ್ದೇಶ, ಸ್ವರೂಪ, ಜಾನಪದ ಕ್ಷೇತ್ರದ ವಿಸ್ತಾರ, ವಸ್ತು, ವಿಷಯ, ಸಂಪಾದಕರಾಗಿ ಹಾಲಿಯವರ ಮಹತ್ವವನ್ನು ಬಣ್ಣಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಜಾನಪದ ಅಧ್ಯಯನ ಪರಂಪರೆಯನ್ನು ಕುರಿತು ಹೇಳಲಾಗಿದೆ. ಜಾನಪದದ ಹುಟ್ಟು, ಅಧ್ಯಯನದ ಬೆಳವಣಿಗೆ, ಕೊಡುಗೆ ಮುಂತಾದ ವಿಷಯಗಳ ಕುರಿತು ಸಮಗ್ರವಾದ ಚಿಂತನೆ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಡಾ. ಹಾಲಿಯವರ ಜಾನಪದ ಸಂಪಾದಿತ ಕೆಲವು ಕೃತಿಗಳ ಸಮೀಕ್ಷೆ ಮಾಡಲಾಗಿದೆ. [illegible] ಗದ್ಯಭಾಗ. ಕೆಲವೊಂದು ಕಾವ್ಯಕ್ಕೆ ಇನ್ನು ಕೆಲವು ಒಡಪು, ಗಾದೆ, ಒಗಟುಗಳಿಗೆ ಸಂಬಂಧಿಸಿದ ಸಂಪಾದನೆಗಳಾಗಿವೆ. ಇವುಗಳ ವೈಶಿಷ್ಟವನ್ನು ಶೋಧಿಸುವ ಕಾರ್ಯವನ್ನು ಕೈಗೊಳ್ಳಲಾಗಿದೆ

ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಜಾನಪದ ಸಂಶೋಧಕರಾಗಿ, ಸಂಪಾದನಾ ಮತ್ತು ಸಂಶೋಧನಾ ನೆಲೆಗಳಲ್ಲಿ ನಡೆದ ಅಧ್ಯಯನವನ್ನು ವಿಶ್ಲೇಷಿಸಲಾಗಿದೆ. 'ಜಾನಪದ ಜೀವಾಳ', 'ಕೃಷಿ ಜಾನಪದ' ವಿಜಾಪೂರ ಜಿಲ್ಲೆಯ ಜಾನಪದ ಕಲೆ, ಕಲಾವಿದರು ಕಥಾ ಲೇಖಕರನ್ನು ಕುರಿತಾದ ಲೇಖನ, ವ್ಯಾಖ್ಯಾನ, ಕಲಾವಿದರ ಪರಿಚಯ, ಕಥೆಗಾರರ ಪರಿಚಯ ಕುರಿತು ವಿವರಿಸಲಾಗಿದೆ.

**ವ್ಯಾಪ್ತಿ :**

ಜಾನಪದ ಕ್ಷೇತ್ರ ವಿಸ್ತಾರವಾದುದು ವಿಶ್ವವ್ಯಾಪ್ತಿಯಾದದು: ಜಾನಪದ ಕ್ಷೇತ್ರಕ್ಕೆ ಸಾವು ಎಂಬುದಿಲ್ಲ, ಕೊನೆ ಎಂಬುದಿಲ್ಲ. ಅದು ಫೀನಿಕ್ಸ್‌ನ ಹಾಗೆ ಹೊಸ ರೂಪ ತಾಳಿ ಮರುಹುಟ್ಟು ಪಡೆಯುತ್ತಲೇ ಇರುತ್ತದೆ. ಇದಕ್ಕೆ ಮುಖ್ಯ ಕಾರಣ ಕಾಲ ಬದಲಾದಂತೆ ಜನರ ಬದುಕು ಬದಲಾವಣೆಗೊಳ್ಳುತ್ತಾ ತನ್ನ ಜೀವಂತಿಕೆಯನ್ನು ಉಳಿಸಿಕೊಳ್ಳುತ್ತಿರುವುದು. ಇತ್ತೀಚಿಗೆ ಜಾನಪದ ಅಧ್ಯಯನವು ವಿವಿಧ ಮುಖವಾಗಿ ನಡೆಯುತ್ತಿರುವುದು ಒಂದು ಆಶಾದಾಯಕ ಬೆಳವಣಿಗೆ. ಈ ನಿಟ್ಟಿನಲ್ಲಿ ಅನೇಕ ವಿದ್ವಾಂಸರು ಜಾನಪದ ಅಧ್ಯಯನ ಸಂಪದನಾ ಕಾರ್ಯಗಳನ್ನು ವ್ಯಾಪಕವಾಗಿ ನಡೆಸುತ್ತಿದ್ದಾರೆ. ಜಾನಪದವು ಪರಿಸರದ ಸೃಷ್ಟಿ, ಅದು ಒಂದು ಪರಿಸರದ ಜನರ ಸರ್ವಸ್ವವನ್ನು ತನ್ನದಾಗಿಸಿಕೊಂಡು ಮುನ್ನಡೆಯುವಂತಹುದಾಗಿದೆ. ಆ ಮೂಲಕ ಜಾನಪದ ಉಳಿವು ಅಧ್ಯಯನಕಾರರಲ್ಲಿ ಆಶಾಭಾವನೆ ಮೂಡಿಸುತ್ತಿದೆ. ಈ ದೃಷ್ಟಿಯಿಂದ ಹೇಳಬೇಕೆಂದರೆ ಜಾನಪದ ಒಳಗೊಳ್ಳದ ವಿಷಯವೇ ಇಲ್ಲ. ಜಾನಪದ ಒಳಗೊಂಡ ವಿಷಯ ವಸ್ತುವಿನ ಅಧ್ಯಯನದಲ್ಲಿ

ತಮ್ಮನ್ನು ತಾವು ತೊಡಗಿಸಿಕೊಂಡವರು ಡಾ. ಎಂ.ಎನ್. ವಾಲಿಯವರು. ಅವರು ಕೃತಿ, ರಚನೆ, ಸಂಶೋಧನೆ, ಗ್ರಂಥ ಸಂಪಾದನೆ ಮುಂತಾದ ಕಾರ್ಯದಲ್ಲಿ ಇಂದಿಗೂ ನಿರತರಾಗಿದ್ದಾರೆ.

ಜನಪದ ಬದುಕಿನ ಹೊಸ ಹೊಸ ಆಚಾರ ವಿಚಾರಗಳನ್ನು, ರೂಢಿ ಪದ್ಧತಿಗಳನ್ನು, ಅವುಗಳ ಅರ್ಥ ಗಾಂಭೀರ್ಯತೆಗಳನ್ನು ಹುಡುಕುವ ಸಂಶೋಧಿಸುವ ಸಂಪಾದಿಸುವ ಉತ್ಸಾಹದ ಚಿಲುಮೆ ಡಾ. ಎಂ.ಎನ್.ವಾಲಿ. ಇವರು ಹಲವಾರು ಜನಪದ ಕೃತಿಗಳನ್ನು ಸ್ವತಃ ರಚನೆ ಮಾಡಿದ್ದಾರೆ ಮತ್ತು ಸಂಪಾದನೆಯನ್ನೂ ಮಾಡಿದ್ದಾರೆ. ಇವರ ಸಂಪಾದನೆ ಸಾಹಿತ್ಯ ತುಂಬ ವೈವಿಧ್ಯಮಯವಾಗಿದೆ. 'ಕೃಷಿ ಜಾನಪದ' 'ಒಗಟುಗಳು' 'ಒಡಪುಗಳು' 'ಡಂಗುರು ಪದಗಳು' 'ಶರಣ ಸ್ಮೃತಿ' ಜನಪದ ಕಲೆ ಕವಿ, ಕಲಾವಿದರು ಕಥೆಗಾರರು ಹೀಗೆ ಹಲವಾರು ಪ್ರಕಾರದ ಜಾನಪದ ಸಾಹಿತ್ಯವನ್ನು ಕಲೆ ಹಾಕಿದ್ದಾರೆ. ಲೇಖನಗಳನ್ನು ಬರೆದಿದ್ದಾರೆ. ಉಪನ್ಯಾಸಗಳನ್ನು ನೀಡಿದ್ದಾರೆ.

ಮೊದಮೊದಲು ಬರಹಗಾರರಿಗೆ ಕಾವ್ಯ ಅತ್ಯಂತ ಆಕರ್ಷಣೀಯವಾದ ಪ್ರಕಾರ. ಡಾ. ಎಂ.ಎನ್. ವಾಲಿಯವರು ಕಾವ್ಯ ಕ್ಷೇತ್ರಕ್ಕೂ ಕೊಡುಗೆ ನೀಡಿದ್ದಾರೆ. ಅದಕ್ಕೆ ಸಂಬಂಧಿಸಿದಂತೆ ಸಂಪಾದನೆಯನ್ನು ಮಾಡಿದ್ದಾರೆ. ಉದಾ : 'ಶರಣಸ್ಮೃತಿ' 'ಸಾವಿರದಾ ಗೀತೆಗಳು' 'ಶಿವಶರಣ ಮೇದಾರ ಕೇತಯ್ಯ'. ಮೊದ ಮೊದಲು ಉಪನ್ಯಾಸಗಳನ್ನು ನೀಡಿದರೂ ನಂತರ ಬರಹ ಮತ್ತು ಸಂಪಾದನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಜಾನಪದದಲ್ಲಿ ಕೃಷಿ ಮಾಡತೊಡಗಿದರು. ಅವುಗಳಲ್ಲಿ ಅರ್ಧಕ್ಕಿಂತ ಹೆಚ್ಚು ಸಂಪಾದನಾ ಗ್ರಂಥಗಳಾಗಿವೆ. ಅರ್ಧದಷ್ಟು ಸ್ವರಚಿತ ಕೃತಿ, ಲೇಖನ, ಉಪನ್ಯಾಸ ಗ್ರಂಥಮಾಲೆಗಳಾಗಿವೆ. ಇವರ ಸಮಗ್ರ ಸಾಹಿತ್ಯವನ್ನು ಅವಲೋಕಿಸಿದಾಗ ಜಾನಪದ ಸಂಶೋಧನೆಗಳೇ ಹೆಚ್ಚು ಕಂಡು ಬರುತ್ತವೆ. ಅದರ ಮಹತ್ವವನ್ನು, ಸತ್ವವನ್ನು ಮತ್ತಷ್ಟು ಅರಿಯುವ ದೃಷ್ಟಿಯಿಂದ ಅವರ ಜನಪದ ಸಾಹಿತ್ಯಾಧ್ಯಯನ ಅವಲೋಕನ ಇಂದಿನ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ.

## ಅಧ್ಯಾಯ : ಎರಡು

## ಜಾನಪದ ಅಧ್ಯಯನ ಪರಂಪರೆ

ಜಗತ್ತಿನ ಜನಪದ ಕಲೆ, ಸಾಹಿತ್ಯ, ಪರಂಪರೆಯಿಂದ ಬಂದಿರುವ ಜ್ಞಾನ, ಜಗತ್ತಿನ ಜನಸಮೂದಾಯದ ಸಂಸ್ಕೃತಿಯ ಉದಾತ್ತ ಮೌಲ್ಯಗಳ ಪುನರುತ್ಥಾನದ ಅಧ್ಯಯನದ ದಾರಿಯಲ್ಲಿ ಜಾನಪದ ಅಧ್ಯಯನ ಪರಂಪರೆ ತನ್ನದೇಯಾದ ರೀತಿಯಲ್ಲಿ ನಡೆಯುತ್ತಿದೆ. ಜೀವಕೋಟಿಯ ನಿರ್ದಿಷ್ಟ ಜನಸಮುದಾಯ ತನ್ನ ಉಳಿವಿಗೆ, ಸಂಸಾರಕ್ಕೆ, ಸಮಾಜಕ್ಕೆ, ಬದುಕಿಗೆ, ಸಂಸ್ಕೃತಿಗೆ, ಸಾವಿಗೆ, ಹುಟ್ಟಿನಿಂದ ಅಂತ್ಯದವರೆಗೆ ಕೆಲವು ಸಂಪ್ರದಾಯ ರೀತಿ – ನೀತಿಗಳು ಆಚಾರ – ವಿಚಾರಗಳು, ಆಚರಣೆ – ಆಲೋಚನೆಗಳನ್ನು ರೂಡಿಗೆ ತಂದಿತು. ಇವೆಲ್ಲ ಮುಂದೆ ಜನಪದದ ಅಂಗವಾಯಿತು. ಜನರು ಮತ್ತು ಜನರ ಬದುಕು ಜನಪದವಾಯಿತು.[1] ಜನಪದ ಘಟಕ ಇಡೀ ಸಮಾಜ ಅಥವಾ ವ್ಯಕ್ತಿಯನ್ನಾದರೂ ಕೂಡ ಪ್ರತಿನಿಧಿಸುತ್ತದೆ. ಆದರೆ ಅದು ಇಂದು ಅನೇಕ ಆಯಾಮಗಳನ್ನು ಪಡೆದುಕೊಂಡು ಮುನ್ನಡೆಯುತ್ತಿದೆ. ಸಾಮಾನ್ಯವಾಗಿ ಜನಪದ ಎಂಬ ಕಲ್ಪನೆ ಆಧುನಿಕ ಪಟ್ಟಣದ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ, ವೈಜ್ಞಾನಿಕ, ಕೈಗಾರಿಕೆ ಹೀಗೆ ಹಲವಾರು ವೈವಿಧ್ಯಗಳಿಗೆ ಹೊರತಾಗಿ ಜನರ ಗುಂಪನ್ನು ಧ್ವನಿಸುತ್ತದೆ. ಅನಿವಾರ್ಯವಾಗಿ ಅಂಥವುಗಳ ನಡುವೆ ಇರಬೇಕಾಗಿ ಬಂದರೂ ತನ್ನ ಮೂಲ ಅಂಶವನ್ನು ಅಂಶಿಕವಾಗಿಯೋ ಹೇರಳವಾಗಿಯೋ ಒಳಗೊಂಡಿರುತ್ತದೆ.

ಪ್ರಾಚೀನ ಕಾಲದಲ್ಲ ಮನುಷ್ಯನ ಬದುಕು ತೀರಾ ಸೀಮಿತವಾಗಿತ್ತು. ವೇಗರಹಿತವಾಗಿತ್ತು. ನಿರಾಳವಾಗಿತ್ತು. ಪ್ರಕೃತಿಗೆ ತೀರಾ ಹತ್ತಿರವಾಗಿತ್ತು. ಜೊತೆಗೆ ಕೂತೂಹಲಭರಿತವೂ ಆಗಿತ್ತು. ವ್ಯಕ್ತಿಯ ಅಭಿವ್ಯಕ್ತಿಯ ಅಂಶಗಳು ಮೌಖಿಕವಾಗಿದ್ದವು . ಕಾರಣ ಬರವಣಿಗೆ ಸಿದ್ದಿಸಿರಲಿಲ್ಲ. ನೆನಪಿನಲ್ಲಿಯೇ ಕೆಲವು ಅಂಶಗಳನ್ನು ಉಳಿಸಿಕೊಳ್ಳುತ್ತಿದ್ದರು. ಆ ನೆನಪಿನ ತಮ್ಮ ಆಸ್ತಿಯನ್ನು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಅಕ್ಕಪಕ್ಕದವರು, ಬಂದುಬಾಂಧವರು. ಹೀಗೆ ತಲೆಮಾರಿನಿಂದ-ತಲೆಮಾರಿಗೆ ನೆನಪಿನಿಂದ ನೆನಪಿಗೆ ಸಾಗಿಸುತ್ತಿದ್ದರು. ಈ ನೆನಪಿನ ನಿಧಿಯೇ ಜಾನಪದವಾಯಿತು.[2] ಸಮಸ್ತ ಸಂಸ್ಕೃತಿಯ ಸಾರರೂಪವೆನಿಸಿತು. ಮನುಕುಲದ ಸಾಂಸ್ಕೃತಿಕ ಸಾರರೂಪದ ಪರಂಪರೆಯ ಅಧ್ಯಯನ ಜಾನಪದದ ಅಧ್ಯಯನದ ರೂಪದಲ್ಲಿ ಮುನ್ನಡೆಯಿತು.

ಜಾನಪದ ಮಾತು ಮತ್ತು ಕೃತಿ ಅಥವಾ ಕ್ರಿಯೆಗಳಿಂದ ಅಭಿವ್ಯಕ್ತವಾಗುತ್ತದೆ. ಜನಪದ ಕಥೆ, ನೀತಿ, ಗಾದೆ, ಒಗಟು, ಲಾವಣಿ, ಮೊದಲಾದ ಶಾಬ್ದಿಕ ಪ್ರಕಾರಗಳು ಮಾತಿಗೆ

---

೧. ಜಾನಪದ ಸ್ವರೂಪ ಮತ್ತು ಸಾಹಿತ್ಯ ಪ್ರೊ. ಡಿ. ಲಿಂಗಯ್ಯ ಡಾ ॥ ಕೆ.ಆರ್. ಸಂಧ್ಯಾರೆಡ್ಡಿ ಪು.೧ ಪ್ರ.ವ. ೧೯೯೬
೨. ಜಾನಪದ ಸ್ವರೂಪ ಮತ್ತು ಸಾಹಿತ್ಯ ಪ್ರೊ. ಡಿ. ಲಿಂಗಯ್ಯ ಡಾ ॥ ಕೆ.ಆರ್. ಸಂಧ್ಯಾರೆಡ್ಡಿ ಪು.೧ ಪ್ರ.ವ. ೧೯೯೬

ಮಾಧ್ಯಮವಾಗುತ್ತವೆ. ಹಾಗೆಯೇ ಜನಪದ ಸಂಪ್ರದಾಯದಲ್ಲಿ ಆಚರಣೆ, ಕುಣಿತ, ಆಟ-ಪಾಟ, ನಂಬಿಕೆ, ವಿಧಿ-ವಿಧಾನ ಮುಂತಾದವು ಕ್ರಿಯೆಗೆ ಮಾಧ್ಯಮವಾಗಿ ಕಂಡುಬರುತ್ತವೆ. ಜಾನಪದವನ್ನು ಒಂದು ವಿಜ್ಞಾನವೆಂದು ಪರಿಗಣಿಸಿ ವೈಜ್ಞಾನಿಕವಾಗಿ ಅಭ್ಯಸಿಸುವ ಒಲವು ಇಂದು ಹೆಚ್ಚಾಗಿದೆ.

ಪಾಶ್ಚಾತ್ಯ ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಗ್ರೀಮ್ ಸಹೋದರರು ಜಾನಪದ ವಿಜ್ಞಾನದ ಜನಕರೆನಿಸಿಕೊಂಡು ಜಾನಪದವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಲು ಆರಂಭಿಸಿದರು. 'Volks kunde' ಎಂಬ ಪದದ ಮುಖಾಂತರ ಅಂದು ವ್ಯಾಪಕವಾಗಿ ಜನಪದ ಬಳಕೆಯಲ್ಲಿತ್ತು. ೧೮೪೬ ಕ್ಕಿಂತ ಮುಂಚೆ ಗ್ರೀಮ್ ಸಹೋದರರು ಕಥೆಗಳ ಸಂಗ್ರಹವನ್ನು ಪ್ರಕಟಿಸಿದರು. ೧೮ ಮತ್ತು ೧೯ ನೇ ಶತಮಾನದಲ್ಲಿ ಜಾನಪದ ಕ್ಷೇತ್ರದಲ್ಲಿ ಅನುಭವ ಜ್ಞಾನವನ್ನು ಪಡೆದುಕೊಂಡು ಇಡೀ ಜಗತ್ತಿನ ಜಾನಪದ ಅಧ್ಯಯನಕ್ಕೆ ದಾರಿದೀಪವಾದರು. ಜಾನಪದ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಜನತೆಯಿಂದಲೇ ಸಂಗ್ರಹ ಮಾಡುವ ಕಾರ್ಯ ಯುರೋಪಿನಲ್ಲಿ ಆಗಲೇ ಆರಂಭವಾಗಿದ್ದಿತ್ತು. ಆದರೆ ಲಯವಿರದೇ ಅರ್ಥವಾಗದಂತಿದ್ದ ಸಾಹಿತ್ಯ ಅದಾಗಿತ್ತು. ಅಂತಹ ಗೀತೆಗಳನ್ನು ಜನ ಮೀನಿನ ಮಾರುಕಟ್ಟೆಯಲ್ಲಿ, ಹಬ್ಬಗಳಲ್ಲಿ, ಸಂತೆ-ಜಾತ್ರೆಗಳಲ್ಲಿ ಹಾಡುತ್ತಿದ್ದರು. ಅವುಗಳನ್ನು ಸಂಗ್ರಹಿಸಿ **"ಜರ್ಮನ್ ಹಳ್ಳಿಯ ಹಾಡಿನ ಹೂವಿನ ದಂಡೆ"** ಎಂಬ ಸಂಕಲನದ ರೂಪದಲ್ಲಿ ಹೊರ ತಂದು ಆರ್ನಿಂ ಮತ್ತು ಜಿಲ್ತಾನೋ ಎಂಬ ಮಿತ್ರರು ಪ್ರಕಟಿಸಿದರು. ಗ್ರೀಮ್ ಸಹೋದರರ **"ಜರ್ಮನಿಯ ಜಾನಪದ ಕಥೆಗಳು" "ಜರ್ಮನಿಯ ಪುರಾಣಕಾವ್ಯ"** ಮುಂತಾದ ಕೃತಿಗಳು ಜಾನಪದ ಅಧ್ಯಯನಕ್ಕೆ ಹೆದ್ದಾರಿಯನ್ನೇ ನಿರ್ಮಿಸಿದವು.[3]

ಭಾರತದಲ್ಲಿ ಋಗ್ವೇದದ ಕಾಲದಿಂದಲೂ ಜಾನಪದ ಅಂಶವನ್ನು ಗುರುತಿಸಲಾಗುತ್ತದೆ. ಗುಣಾಢ್ಯನ "ಬೃಹತ್‌ಕಥೆ", ಕ್ಷೇಮೇಂದ್ರನ "ಬೃಹತ್ಕಥಾಮಂಜರಿ", ಸೋಮದೇವನ "ಕಥಾಸರಿತ್ಸಾಗರ", "ಪಂಚತಂತ್ರ", "ಹಿತೋಪದೇಶ", "ಶುಕುಸಂಪ್ರತಿ", "ಬೇತಾಳ ಪಂಚವಿಂಶತಿ", "ವಡ್ಡಾರಾಧನೆ" ಮುಂತಾದ ಕೃತಿಗಳು ಜನಪದ ಮೂಲದಿಂದಲೇ ಸೃಷ್ಟಿಯಾದವುಗಳಾಗಿವೆ.[4]

ಕರ್ನಾಟಕ ಜಾನಪದ ಅಧ್ಯಯನ ಪರಂಪರೆಗೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆಯೂ ಅಪಾರವಾಗಿದೆ. ಗ್ರೋಮ್, ಫ್ಲೀಟ್, ಮೇರಿಫಿರೆ, ಕಿಟೆಲ್, ಅಬೇದುಬೋಯ್ ಮುಂತಾದವರು ಪ್ರಮುಖರೆನಿಸಿಕೊಂಡಿದ್ದಾರೆ.

---

೩. ಕನ್ನಡ ಸಾಹಿತ್ಯ ಕೋಶ ಸಂಪಾದನೆ : ರಾಜಪ್ಪ ದಳವಾಯಿ ಪು. ೧೮೯ ಪ

೪. ಜಾನಪದ ಸ್ವರೂಪ ಮತ್ತು ಸಾಹಿತ್ಯ ಪ್ರೊ. ಡಿ. ಲಿಂಗಯ್ಯ ಡಾ ॥ ಕೆ.ಆರ್. ಸಂಧ್ಯಾರೆಡ್ಡಿ ಪು. ೪೫ ಪ್ರ.ವರ್ಷ ೨೦೦೬ ವರ್ಷ ೨೦೦೬

ಗ್ರೋಮ್ ಈತನ ಪ್ರಸಿದ್ಧ ಕೃತಿ "The Folk Songs of Southerm India" ಈ ಕೃತಿಯಲ್ಲಿ ಕನ್ನಡದ ಜೊತೆಗೆ ತಮಿಳು, ಮಲೆಯಾಳಂ, ಬಡಗ, ಕೊಡವ ಭಾಷೆಗಳ ಜನಪದ ಗೀತೆಗಳನ್ನು ಇಂಗ್ಲೀಷಿನಲ್ಲಿ ನೀಡಿದ್ದಾರೆ. ಇನ್ನೊಂದು ಕೃತಿ "Canerese Folk Songs" ಇದು ಕರ್ನಾಟಕ ಜಾನಪದ ಕ್ಷೇತ್ರ ಕಾರ್ಯಕ್ಕೆ ಪ್ರೇರಣೆಯನ್ನೊದಗಿಸಿತು.

ಫ್ಲೀಟ್ ಕರ್ನಾಟಕದ ಜನಪದ ಸಂಗ್ರಹಾ ಕಾರ್ಯದಲ್ಲಿ ಚಿರಸ್ಥಾಯಿಯಾದ ಹೆಸರು, ಉತ್ತರ ಕರ್ನಾಟಕದ ಎಂಟು ಲಾವಣಿಗಳನ್ನು ೧೮೮೫ ರಿಂದ ೧೮೯೦ ವರೆಗೆ ಇಂಡಿಯನ್ ಅಂಟಿಕ್ವಿಯಲ್ಲಿ ಪ್ರಕಟಿಸಿದನು. ಇವು ಕರ್ನಾಟಕದ ಐತಿಹಾಸಿಕ ಘಟನೆಗಳ ಕುರಿತವುಗಳಾಗಿವೆ. ಮೇರಿಫಿರೆ ಈತನ "Old Deccan Days" ೧೮೬೮ ರಲ್ಲಿ ಪ್ರಕಟವಾಯಿತು. ಇಲ್ಲಿ ಮುಂಬೈ ಪ್ರಾಂತ್ಯದ ಪ್ರದೇಶದಲ್ಲಿ ರಚಿತವಾದ ಕನ್ನಡ ಜನಪದ ಕಥೆಗಳಿವೆ. ಹಾಗೆಯೇ ಫರ್ಡಿನಾಂಡ್ ಕಿಟೆಲ್ ಕರ್ನಾಟಕದ ನಾನಾ ಭಾಗಗಳಲ್ಲಿ ಸಂಚರಿಸಿ ಸುಮಾರು ನಾಲ್ಕು ಸಾವಿರದ ನೂರ ಅರವತ್ತೆಂಟು ಗಾದೆಗಳನ್ನು ಸಂಗ್ರಹಿಸಿ ತನ್ನ ಕೋಶದಲ್ಲಿ ಬಳಸಿದ್ದಾನೆ. ಅಬೇದುಬೋಯ್ ಎನ್ನುವ ಕ್ರಿಶ್ಚಿಯನ್ ಪಾದ್ರಿ "Hindu Manners Customs and ceremonies" ಎಂಬ ಕೃತಿಯ ಮೂಲಕ ಭಾರತದ ಆದ್ಯ ಜಾನಪದ ಸಂಗ್ರಹಕಾರನೆನಿಸಿಕೊಂಡಿದ್ದಾನೆ. ಈತನ ಈ ಕೃತಿ ಕರ್ನಾಟಕ ಜಾನಪದ ಅಧ್ಯಯನಕ್ಕೆ ನಾಂದಿಯಾಯಿತು.

ನವೋದಯ ಚಳುವಳಿಯೊಂದಿಗೆ ಜನಪದ ಸಾಹಿತ್ಯದಲ್ಲಿ ಶಿಷ್ಟ ದೇಶಪ್ರೇಮ ಸ್ವಾತಂತ್ರ್ಯಾಪೇಕ್ಷೆ ಮೊದಲಾದವು ಕಣ್ಣು ಹಾಯಿಸುವಂತೆ ಮಾಡಿದವು. ಈ ಮೂಲಕ ಜನಪದ ಸಾಹಿತ್ಯ ಕುರಿತಾದ ಆಸಕ್ತಿ ಹೆಚ್ಚಾಯಿತು. ಪಾಶ್ಚಾತ್ಯರಲ್ಲಿ ನಡೆದ ಜಾನಪದ ಅಧ್ಯಯನಗಳಿಗೂ ಕರ್ನಾಟಕದಲ್ಲಿನ ಜಾನಪದ ಅಧ್ಯಯನಕ್ಕೂ ಒಂದು ಮುಖ್ಯ ವ್ಯತ್ಯಾಸವೇನೆಂದರೆ ಪಾಶ್ಚಾತ್ಯರು ಸಮಾಜಶಾಸ್ತ್ರೀಯ ಹಾಗೂ ಮಾನವಶಾಸ್ತ್ರೀಯ ದೃಷ್ಟಿಯಿಂದ ಜಾನಪದ ಅಧ್ಯಯನಕ್ಕೆ ತೊಡಗಿದರೆ ನಮ್ಮ ವಿದ್ವಾಂಸರು ಸಾಹಿತ್ಯಿಕ ದೃಷ್ಟಿಯಿಂದ ಜಾನಪದ ಅಧ್ಯಯನಕ್ಕೆ ತೊಡಗಿದರು. ಹೀಗಾಗಿ ನಮ್ಮವರ ಗಮನ ಗೀತೆ, ಕಾವ್ಯ, ಕಥೆ, ಒಗಟು, ಗಾದೆ, ಮೊದಲಾದ ಸಾಹಿತ್ಯಿಕ ಪ್ರಕಾರಗಳತ್ತಲೇ ಕೇಂದ್ರೀಕೃತವಾಗಿ ಅಧ್ಯಯನಗಳು ನಡೆದವು. ಈ ನಿಟ್ಟಿನಲ್ಲಿ ಕರ್ನಾಟಕದ ಅನೇಕ ವಿದ್ವಾಂಸರು ತಮ್ಮದೇಯಾದ ಕೊಡುಗೆಯನ್ನು ನೀಡಿದ್ದಾರೆ. ಉದಾ : ಮಧುರಚೆನ್ನರು. ಕಾಪಸೆ ರೇವಪ್ಪ, ಸಿಂಪಿಲಿಂಗಣ್ಣ ಎಂಬ ಹಲಸಂಗಿ ಗೆಳೆಯರ ಗುಂಪು ೧೯೩೧ ರಲ್ಲಿ ಪ್ರಕಟಿಸಿದ **"ಗರತಿಯರ ಹಾಡುಗಳು"** ಎಂಬ ಸಂಕಲನವನ್ನು ಜಯಕರ್ನಾಟಕ ಗ್ರಂಥಮಾಲೆಯಲ್ಲಿ ಹೊರತಂದರು. ಮೂವತ್ತರ ದಶಕದಲ್ಲಿಯೇ ಪ್ರಕಟವಾದ ಇನ್ನಿತರ ಜನಪ್ರಿಯ ಗೀತ

ಸಂಕಲನಗಳೆಂದರೆ ಸಿಂಪಿ ಲಿಂಗಣ್ಣ ಮತ್ತು ಪಿ. ಧೂಲಾಸಾಹೇಬ ಅವರು ಜೊತೆಗೂಡಿ ಪ್ರಕಟಿಸಿದ "ಜೀವನ ಸಂಗೀತ" ಎಂಬ ಲಾವಣಿ ಸಂಗ್ರಹ, ಕಾಪಸೆ ರೇವನಪ್ಪನವರ "ಮಲ್ಲಿಗೆ ದಂಡೆ", ತೋರ್ಕೆಯವರ "ಹಳ್ಳಿಯ ಹಾಡುಗಳು", ಬಿ.ಎಸ್. ರಂಗಸ್ವಾಮಿಯವರ "ಹಳ್ಳಿಯ ಪದಗಳು", ಗೊರೂರವರ "ಹಳ್ಳಿಯ ಹಾಡುಗಳು", ಬಿ.ಎಸ್. ಗದ್ದಗಿಮಠ ಅವರ "ಮಲ್ಲಮ್ಮ ಲಾವಣಿ", "ಕುಮಾರರಾಮನ ದುಂದುಮೆಗಳು", ಅರ್ಜುನಜೋಗಿಯ "ಹಾಡುಗಬ್ಬ" ಕೃತಿಗಳು ಗಮನಸೆಳೆಯುತ್ತವೆ. ೧೯೩೫ ರ ವೇಳೆಗೆ ಕನ್ನಡದಲ್ಲಿ ಪೋಕಲೋರ್ ಪದವನ್ನು ಬಳಸಿ ಆ ವಿಷಯಕ್ಕೆ ಸಂಬಂಧಿಸಿದ ವಿವರಣೆಗಳನ್ನು ಚರ್ಚಿಸಿ ಜಾನಪದವನ್ನು ಸಂಸ್ಕೃತಿಯ ಅಳತೆಗೋಲಾಗಿ ವಿವೇಚಿಸಿದ ಮೊದಲ ಪ್ರಯತ್ನವನ್ನು ದೇವುಡು ಅವರ "ಕರ್ನಾಟಕ ಸಂಸ್ಕೃತಿ" ಎಂಬ ಕೃತಿಯಲ್ಲಿ ಕಾಣುತ್ತೇವೆ. ೧೯೩೩ ರಲ್ಲಿ "ಹುಟ್ಟಿದ ಹಳ್ಳಿ ಹಳ್ಳಿಯ ಹಾಡು" ಎಂಬ ಕೃತಿಯನ್ನು ಸಂಪಾದಿಸಿ ಜಾನಪದ ಕಾರ್ಯಕ್ಷೇತ್ರಕ್ಕೆ ಹೊಸ ಶಕ್ತಿಯನ್ನೇ ತಂದವರು ಅರ್ಚಕ ರಂಗಸ್ವಾಮಿಯವರು. ಮತಿಘಟ್ಟ ಕೃಷ್ಣಮೂರ್ತಿ ಇವರ "ನಾಡಪದಗಳು" ಎಂಬ ಕೃತಿಯ ಪ್ರಕಟನೆಯ ನಂತರ ಕನ್ನಡ ಜಾನಪದ ಸಾಹಿತ್ಯದ ಒಂದು ಕ್ರಮಬದ್ಧ ವಿಭಜನೆಯ ಅಧ್ಯಯನ ಪ್ರಾರಂಭವಾಯಿತು. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದ ದಿಗ್ಗಜರೆಲ್ಲರೂ ಜಾನಪದ ಸಾಹಿತ್ಯ ಪ್ರಚಾರ, ಸಂಪಾದನೆ ಅಧ್ಯಯನದಲ್ಲಿ ತೀವ್ರವಾಗಿ ತೊಡಗಿಸಿಕೊಂಡಿದ್ದು ಗಮನಾರ್ಹ. ಮಾಸ್ತಿ, ಬಿ.ಎಂ.ಶ್ರೀ. ತೀ.ನಂ.ಶ್ರೀ. ಬೆಟಗೇರಿ ಕೃಷ್ಣಶರ್ಮ, ಎಸ್.ವಿ. ರಂಗಣ್ಣ, ಎಂ.ಎಸ್. ಸುಂಕಾಪೂರ, ಜವರೇಗೌಡ, ಜಿ.ಶಂ. ಪರಮಶಿವಯ್ಯ, ಎಲ್.ಆರ್. ಹೆಗಡೆ, ಹಾ.ಮಾ.ನಾ., ರಾ.ಗೌ., ಎಚ್.ಎಲ್. ನಾಗೇಗೌಡ, ಚಂದ್ರಶೇಖರ ಕಂಬಾರ, ಪುರುಷೋತ್ತಮ ಬಿಳಿಮಲೆ, ಅಗ್ರಮಾನ್ಯರು. ಇಂತಹವರ ಸಾಲಿಗೆ ಸೇರುತ್ತಿರುವ ತಮ್ಮನ್ನು ತಾವು ಜಾನಪದ ಕ್ಷೇತ್ರದ ಅಧ್ಯಯನದಲ್ಲಿ ತೊಡಗಿಸಿಕೊಂಡು ಸಂಗ್ರಹ ಸಂಪಾದಿಸಿದಂತೆಯೇ ಮುದ್ರಿಸಿ ಪ್ರಕಟಿಸುತ್ತಾ ಹೋದ ಕನ್ನಡ ಜಾನಪದ ಸಾಹಿತ್ಯ ಸಂಗ್ರಹಕಾರರು ಡಾ. ಎಂ.ಎಸ್. ವಾಲಿಯವರು.

ಡಾ. ಎಂ.ಎಸ್. ವಾಲಿಯವರು ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಸಾಲೋಟಗಿಯಲ್ಲಿ ೦೧-೦೬-೧೯೩೫ ರಲ್ಲಿ ಜನಿಸಿದರು. ಇಂಡಿಯ ಶ್ರೀ ಶಾಂತೇಶ್ವರ ಹೈಸ್ಕೂಲ್‌ನಲ್ಲಿ ೧೯೫೫ ರಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ವೃತ್ತಿಯನ್ನು ಆರಂಭಿಸಿದರೂ ವಿದ್ಯೆಯ ಹಸಿವಿನಿಂದ ೧೯೬೭ ರಲ್ಲಿ ಬಿ.ಎ. ಪದವಿಯನ್ನು ಕಲಾ ಹಾಗೂ ವಾಣಿಜ್ಯ ಕಾಲೇಜ ಜಮಖಂಡಿಯಲ್ಲಿ ಮುಗಿಸಿದರು. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ ಎಂ.ಎ. ಪದವಿಯನ್ನು ೧೯೭೦ ರಲ್ಲಿ ಮುಗಿಸಿ, ಶಿವಾನಂದ ಪದವಿ ಕಾಲೇಜು

ಕಾಗವಾಡದಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡರು. ಪ್ರಾಚಾರ್ಯರವರೆಗೆ ಉನ್ನತ ಹುದ್ದೆಗೇರಿದರು. ಉತ್ತಮ ಪ್ರಾಧ್ಯಾಪಕರೆನಿಸಿಕೊಂಡು ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾದರು. ವೃತ್ತಿಯ ಜೊತೆಗೆ ಅಧ್ಯಯನ ಮುಂದುವರೆಸಿದರು. "ಸಿಂಪಿ ಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ" ಕುರಿತ ಸಂಶೋಧನಾ ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿ ೧೯೮೫ ರಲ್ಲಿ ಡಾಕ್ಟರೇಟ್ ಪದವಿ ಪಡೆದರು.

ಮೊದಮೊದಲು ಉಪನ್ಯಾಸಗಳನ್ನು ನೀಡತೊಡಗಿದರು. ಇವರ ಮೊದಲ ಉಪನ್ಯಾಸ ಗ್ರಂಥ ಷಡಕ್ಷರದೇವ ಕವಿಯ ರಾಜಶೇಖರ ವಿಳಾಸ ಕ.ವ.ವಿ.ದಲ್ಲಿ ೧೯೭೪ ರಲ್ಲಿ ಪ್ರಕಟಗೊಂಡಿತು. ಇವರ ಪ್ರಥಮ ಕವನ ಸಂಕಲನ "ಶುಭೋದಯ" ೧೯೮೦ ರಲ್ಲಿ ಪ್ರಕಟಗೊಂಡಿತು. ಇವರ ಪ್ರಥಮ ಚರಿತ್ರೆ "ಶ್ರೀ ಮರಿಮಹಾರಾಜರು" ೧೯೮೧ ರಲ್ಲಿ ಪ್ರಕಟನೆಗೊಂಡಿತು. ಇವರ ಪ್ರಥಮ ಸಂಪಾದನಾ ಗ್ರಂಥ "ಡಂಗುರ ಪದಗಳು" ೧೯೮೨ ರಲ್ಲಿ ಪ್ರಕಟಗೊಂಡಿತು. ೧೯೯೦ ರಲ್ಲಿ "ಸಿಂಪಿ ಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ" ಕುರಿತು ಮಹಾಪ್ರಬಂಧ ಬರೆದು ಪ್ರಕಟಿಸಿ ಜನಮನ್ನಣೆಗೆ ಪಾತ್ರರಾದರು. "ನನ್ನ ಭೂಮಿ" ಎಂಬ ಸಂಪಾದಿತ ನಾಟಕವನ್ನು ೧೯೯೧ ರಲ್ಲಿ ಪ್ರಕಟಗೊಳಿಸಿದರು. ಹೀಗೆ ಕಾವ್ಯ , ನಾಟಕ, ಚರಿತ್ರೆ, ಗಾದೆ, ಒಡಪು, ಕಥೆ, ಮುಂತಾದ ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ಸುಮಾರು ೫೦ ಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿದ್ದು, ಇವರ ಸಾಧನೆಯ ಸಂಕೇತ. ತಾವೇ ಸ್ವತಃ ೧೯೮೦ ರಲ್ಲಿ ಆರಂಭಿಸಿದ "ಭುವನೇಶ್ವರಿ ಪ್ರಕಾಶನ" ಎಂಬ ಪ್ರಕಟನಾ ಸಂಸ್ಥೆಯಿಂದ ಸಾಕಷ್ಟು ಕೃತಿಗಳು ಬೆಳಕು ಕಂಡಿವೆ.

ಶ್ರೀಯುತರದು ಜಾನಪದ ಬದುಕು. ಧಾರವಾಡ ಆಕಾಶವಾಣಿಯಲ್ಲಿ ಜಾನಪದ ಕಲಾವಿದರ ಆಯ್ಕೆ ಸಮಿತಿಯ ಅಧ್ಯಕ್ಷರಾಗಿ, ಜಾನಪದ ಪರಿಷತ್ತಿನ ಟ್ರಸ್ಟಿಯಾಗಿ ಜಾನಪದ ಕಲಾಕೇಂದ್ರದ ಅಧ್ಯಕ್ಷರಾಗಿ ಕರ್ನಾಟಕ ಜಾನಪದ ಪರಿಷತ್ ವಿಜಾಪೂರ ಇದರ ಜಿಲ್ಲಾಧ್ಯಕ್ಷರಾಗಿ ಶ್ರಮಿಸುತ್ತಿದ್ದಾರೆ. ಇವರ ಅಧ್ಯಯನದ ಸಾಕ್ಷಿಯಾಗಿ ಆದರ್ಶ ಶಿಕ್ಷಕ, ಜಾನಪದ ತಜ್ಞ, ಸುವರ್ಣ ಕನ್ನಡಿಗ, ಬಸವಜ್ಯೋತಿ, ಬಸವಧರ್ಮ ಚಿಂತಕರು, ಕರ್ನಾಟಕ ರಕ್ಷಣಾ ವೇದಿಕೆಯ ರಾಜ್ಯ ಘಟಕದಿಂದ "ಜಾನಪದ ಜಂಗಮ" ಡಾ. ಎಸ್.ಕೆ. ಕರೀಂಖಾನ್ ಪ್ರಶಸ್ತಿಗಳು ಸಂದಿವೆ. ೧೯೮೨ ರಲ್ಲಿ ಗೋಕಾಕ ಚಳುವಳಿಯಲ್ಲಿ ಹೋರಾಟ ಮಾಡಿ ಜೈಲು ಶಿಕ್ಷೆ ಅನುಭವಿಸಿದ್ದಾರೆ. ಗುಡ್ಡಾಪೂರದಲ್ಲಿ ಜರುಗಿದ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ನೇಮಕಗೊಂಡು ಯಶಸ್ವಿಗೊಳಿಸಿದ್ದು ಇವರ ಕ್ರಿಯಾಶೀಲತೆಗೆ ಸಾಕ್ಷಿಯಾಗಿದೆ. ಬಹುಮುಖ

ಸಾಧನೆ ಹೊಂದಿದ ಡಾ. ಎಂ.ಎನ್. ವಾಲಿಯವರು ೭೫ ನೇ ವಯಸ್ಸಿನಲ್ಲಿ ಕಾಲಿಡುತ್ತಿರುವ ಇವರು ಈಗಲೂ ತಮ್ಮನ್ನು ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ಇಂತಹ ಮೇರು ವ್ಯಕ್ತಿತ್ವವನ್ನು ಹೊಂದಿರುವ ಇವರ ಸಾಹಿತ್ಯ ಸಂಪಾದನೆ ಕುರಿತಾದ ಅಧ್ಯಯನದ ಅವಶ್ಯಕತೆ ಇದೆ. ಇವರ ಸಂಪಾದನಾ ಸಾಹಿತ್ಯ ವಿಶಿಷ್ಟತೆಯಿಂದ ಕೂಡಿದುದಾಗಿದೆ. ಅವರು ಯಾವ ಕೆಲಸ ಕೈಗೆತ್ತಿಕೊಂಡರೂ ಆಸ್ಥೆಯಿಂದ ಚೊಕ್ಕವಾಗಿ ಮಾಡುವಂಥವರು. ಜಾನಪದ ಸಾಹಿತ್ಯದ ಸಂಗ್ರಹ ಮಾತ್ರ ಮಾಡಿಬಿಡದೆ ಸೊಗಸಾಗಿ ಹಾಡುವುದನ್ನು ಕರಗತ ಮಾಡಿಕೊಂಡವರು. ಕಥಿಸುವದನ್ನು ಸಲೀಸಾಗಿ ಕಥಿಸುವವರು. ಸಂದರ್ಭಾನುಸಾರವಾಗಿ ಒಗಟಿನ ಬಲೆಯನ್ನು ಬೀಸಾಗಿ ಬೀಸುವರು. ಒಡಪಿನ ನೆಲೆಯನ್ನು ಲೀಸಾಗಿ ಸೂಸುವವರಾಗಿದ್ದಾರೆ. ಕವನ, ಕಥೆ, ವಿಮರ್ಶೆ ಒಡಪುಗಳು, ಗಾದೆಗಳು, ಕಲೆ ಕಲಾಪಿದ ಮುಂತಾದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯದಲ್ಲಿ ಹೆಸರು ಗಳಿಸಿದ್ದಾರೆ. ಸಂಶೋಧಕರಾಗಿ ಮೈವೆತ್ತಿದ್ದಾರೆ. ಶಕ್ತಿ, ನೈಪುಣ್ಯ ಮುಂತಾದ ಪರಿಕರಗಳನ್ನು ಪಡೆದು ಸಾಹಿತ್ಯ ಸೃಷ್ಟಿಗೆ ಹೆಗಲು ಕೊಟ್ಟು ನಿಂತಿರುವವರಾಗಿದ್ದಾರೆ.

## ಅಧ್ಯಾಯ–ಮೂರು

## ಡಾ. ಎಂ.ಎನ್. ವಾಲಿಯವರ ಜಾನಪದ ಸಾಹಿತ್ಯ ಸಂಶೋಧನೆ.

ಗ್ರಂಥಗಳ ಸಂಪಾದನೆ ಮಾಡಿ ಪ್ರಕಟಿಸುವುದು ಬರಹಗಾರನಷ್ಟೆ ಜವಾಬ್ದಾರಿಯುಳ್ಳದ್ದು. ಏಕೆಂದರೆ ಯಾವುದೇ ಕೃತಿಯನ್ನು ಪ್ರಕಟಿಸಲು ಪೂರ್ಣ ಪ್ರಮಾಣದಲ್ಲಿ ಓದುವುದು; ಅದಕ್ಕೆ ಮಹತ್ವವೆನಿಸುವ ರೀತಿಯಲ್ಲಿ ಪ್ರಸ್ತಾವನೆ ಮತ್ತು ಅರ್ಥವಿವರಣೆ ಹಾಗೂ ವಿಷಯ ನಿರೂಪಣೆ ಮಾಡುವುದಾಗಿದೆ. ಜನಸಾಮಾನ್ಯರಿಗೆ ತಿಳಿಯುವ ರೀತಿಯಲ್ಲಿ ಇರಬೇಕೆಂಬುವುದನ್ನು ಸಂಪಾದಕರು ಅರಿತಿರಬೇಕಾಗುತ್ತದೆ. ಅಲ್ಲದೇ ಸಂಪಾದಿತ ಕೃತಿಯ ವಿಷಯಗಳ ಚೌಕಟ್ಟು ನಿರ್ಮಿಸುವುದು, ಅಕ್ಷರ ದೋಷಗಳುಂಟಾಗದಂತೆ; ಅರ್ಥ ವ್ಯತ್ಯಾಸವಾಗದಂತೆ ಕಾಳಜಿ ವಹಿಸುವುದು, ಮೂಲ ಬರಹದಲ್ಲಿ ಅಂದರೆ ಹಸ್ತಪ್ರತಿಯಲ್ಲಿ ಲೋಪದೋಷಗಳುಂಟಾಗುತ್ತಿದ್ದರೆ ಅವುಗಳನ್ನು ಸರಿಪಡಿಸುವುದು ಈ ಮುಂತಾದ ಅಂಶಗಳನ್ನು ಅರಿತು ಪ್ರಕಟಿಸುವುದು ಸಂಪಾದಕನ ಆದ್ಯ ಕರ್ತವ್ಯವಾಗಿದೆ. ಡಾ. ಹಾ. ಮಾ. ನಾಯಕರ "ಜನಪದ ಸಾಹಿತ್ಯ ಮತ್ತು ಸ್ವರೂಪ" ಎಂಬ ಲೇಖನ ಜನಪದದ ಬಗ್ಗೆ ಒಂದು ಖಚಿತ ಪರಿಕಲ್ಪನೆ ನೀಡಿತು. ನಂತರದ ಜಾನಪದ ಅಧ್ಯಯನಗಳಿಗೆ ಒಂದು ಶಾಸ್ತ್ರೀಯ ಚೌಕಟ್ಟು ನೀಡಿತು. ಜೊತೆಗೆ ಅವರು ಪ್ರಕಟಿಸಿದ **"ಜಾನಪದ ಸ್ವರೂಪ"** ಮತ್ತು **'ಕನ್ನಡ ಜಾನಪದ ಗ್ರಂಥಸೂಚಿ'** ಎಂಬ ಗ್ರಂಥಗಳು ಜಾನಪದ ಅಧ್ಯಯನದ ಮೈಲುಗಲ್ಲುಗಳಾಗಿವೆ."[1] ಇದರಲ್ಲಿ ೧೯೭೪ರ ವರೆಗೆ ಕನ್ನಡದಲ್ಲಿ ಪ್ರಕಟವಾದ ಪ್ರತಿಯೊಂದು ಜಾನಪದ ಕೃತಿಯನ್ನು ಸಂಗ್ರಹವಾಗಿ ಪರಿಚಯಿಸಿದ್ದಾರೆ. ಕನ್ನಡದಲ್ಲಿ ಜಾನಪದ ಸಂಬಂಧವಾಗಿ ಹಿಂದಿನಿಂದ ನಡೆದು ಬಂದಿರುವ ಅಧ್ಯಯನಗಳ ಸ್ವರೂಪವನ್ನು ಈ ಗ್ರಂಥ ಸೂಚಿಯ ಮೂಲಕ ತಿಳಿಯುತ್ತೇವೆ. ಎಂ. ಎನ್. ವಾಲಿಯವರದು ೧೯೭೪ ರಿಂದೀಚೆಗೆ ಸಾಹಿತ್ಯ ಕೃಷಿ ಆರಂಭವಾಗಿದೆ. ಇವರ ಜಾನಪದ ಸಾಹಿತ್ಯವನ್ನು ಒತ್ತಟ್ಟಿಗೆ ತರುವ ಒಂದು ಸಣ್ಣ ಪ್ರಯತ್ನ ಈ ಅಧ್ಯಾಯದ ಉದ್ದೇಶವಾಗಿದೆ.

ವಾಲಿಯರು ಹಲಸಂಗಿ ಗೆಳೆಯರು ಎಂದು ಪ್ರಸಿದ್ಧಿಯನ್ನು ಪಡೆದ ಗುಂಪಿನ ಕಾಪಸೆ ರೇವಪ್ಪ, ಸಿಂಪಿ ಲಿಂಗಣ್ಣ ಹಾಗೂ ಮಧುರಚೆನ್ನರ ಸಾಹಿತ್ಯದ ಪ್ರೇರಣೆಯಿಂದ ಅದೇ ಪರಂಪರೆಯನ್ನು ಮುಂದುವರೆಸಿಕೊಂಡು ಸಂಪಾದನೆ, ಸಂಶೋಧನಾ ಕಾರ್ಯದಲ್ಲಿ ತೊಡಗಿದರು. ಓರ್ವ ಕವಿ, ಲೇಖಕ, ಸಂಶೋಧಕ, ಸಂಪಾದಕನ ಬೆಳವಣಿಗೆಯನ್ನು ಗುರುತಿಸುವಲ್ಲಿ ಅವರ ಕೃತಿಗಳ ಸಂಖ್ಯೆ ಮುಖ್ಯವಾಗುವುದಿಲ್ಲ. ಅವರ ಆಸಕ್ತಿ ವಿಷಯ ವಸ್ತುವಿನ ಸತ್ವವನ್ನು ಪರಿಗಣಿಸಿ ಸ್ಥಾನವನ್ನು ಗೊತ್ತುಪಡಿಸಬೇಕಾಗುತ್ತದೆ.

---

ಜಾನಪದ ಸ್ವರೂಪ ಮತ್ತು ಸಾಹಿತ್ಯ: ಪ್ರೊ. ಡಿ. ಲಿಂಗಯ್ಯ. ಡಾ॥ ಕೆ. ಆರ್. ಸಂಧ್ಯಾರೆಡ್ಡಿ. ಪುಟ ೧೩೯ ಪ್ರ ವರ್ಷ ೧೯೯೭

ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ಅವರ ಸಂಪಾದಿತ ಕೃತಿಗಳ ಸಮೀಕ್ಷೆಗೆ ಮೀಸಲಿಡಲಾಗಿದೆ. "ಡಂಗುರ ಪದಗಳು", "ಸಿರಿಗನ್ನಡ ಒಗಟುಗಳು", "ಜಾನಪದ ಒಡಪುಗಳು", "ಶರಣಸ್ಮೃತಿ", "ಶಿವಶರಣ ಮೇದಾರ ಕೇತಯ್ಯ", "ದುಂಡಮಲ್ಲಿಗೆ ಹೂವಬುಟ್ಟಲಿ ಬಂದಾವ", "ಆಯ್ದು ಗಾದೆಗಳು", "ಸಾವಿರದ ಜನಪದ ಗೀತೆಗಳು" ಈ ಅಧ್ಯಾಯಕ್ಕೆ ಸೇರ್ಪಡೆಯಾಗಿವೆ. ಇವುಗಳ ವಿಶ್ಲೇಷಣೆ ಕೆಳಗಿನಂತಿವೆ.

**"ಡಂಗುರ ಪದಗಳು"**

"ಡಂಗುರ ಪದಗಳು" ವೀರಶೈವ ಅಧ್ಯಯನ ಸಂಸ್ಥೆ ಗದಗದಲ್ಲಿ ೧೯೮೨ ರಲ್ಲಿ ಪ್ರಕಟಗೊಂಡಿತು. ಸಾಲೋಟಗಿ ಶ್ರೀ ಶಿವಯೋಗೀಶ್ವರ ಡಂಗುರ ಪದಗಳು ಈ ಗ್ರಂಥದಲ್ಲಿವೆ. ಸ್ವರವಚನ ಸಾಹಿತ್ಯ ವರ್ಗಕ್ಕೆ ಸೇರುವ ಈ ಡಂಗುರ ಪದಗಳು ಸಾಮಾನ್ಯರ ಕೈ ಬಾಯಿಗೆ ಸಿಕ್ಕು ತುಂಬ ಅಶುದ್ಧ ರೂಪದಲ್ಲಿ ಪ್ರಚಾರದಲ್ಲಿದ್ದವು. ದಿನಕಳೆದಂತೆ ಇನ್ನೂ ಅಶುದ್ಧವಾಗುವ ಅಂಜಿಕೆಯಿಂದ ಆ ಭಾಗದಲ್ಲಿ ತುಂಬ ಜನಪ್ರಿಯವಾಗಿರುವ ಈ ಡಂಗುರ ಪದಗಳನ್ನು ಡಾ. ಎಂ. ಎಸ್. ವಾಲಿಯವರು ಸಂಗ್ರಹಿಸಿದರು. ಪ್ರತಿ ಸೋಮವಾರ ಸಾಲೋಟಗಿಯ ದೇವಾಲಯದಲ್ಲಿ ಶಿವಪೂಜೆ ಮುಗಿದ ನಂತರ ಹಾಡುವ ಪದಗಳಿವು.

ಈ ಕೃತಿಯಲ್ಲಿ ಒಟ್ಟು ೭೨ ಪದಗಳನ್ನು ಸಂಗ್ರಹಿಸಲಾಗಿದೆ. ಈ ಪದಗಳು ನೀತಿಜ್ಞಾನ, ಬೋಧಜ್ಞಾನ, ಕಾಲಜ್ಞಾನ, ಪಿಂಡಜ್ಞಾನ ಕುರಿತು ವಿವರಣೆ ನೀಡುತ್ತವೆ. ಇಲ್ಲಿಯ ಪದಗಳು ದ್ವಿಪದಿ, ತ್ರಿಪದಿ, ಚೌಪದಿ, ಅಷ್ಟಪದಿ ಬಂಧಗಳಲ್ಲಿವೆ.

'ಯೋಗಿಯ ನೆನೆಯಿರೊ' ಪದದಲ್ಲಿ ಯೋಗಿಯನ್ನು ನೆನಪು ಮಾಡಿಕೊಂಡು ಆತನನ್ನು ನೆನೆಯುವುದರಿಂದ ಅಂದರೆ ಅಮರಪುರದ ಅಪ್ಪನಾಗಿ, ಅಣ್ಣನಾಗಿ, ಅಯ್ಯನಾಗಿ, ಸಿದ್ಧನಾಗಿ, ಲಿಂಗನಾಗಿರುವಂತಹ ಶಿವಯೋಗಿಯನ್ನು ನೆನೆಯುವುದರಿಂದ ಯಾವುದೇ ರೀತಿಯ ಭಾಗ್ಯಕ್ಕೆ ಕೊರತೆಯಿಲ್ಲ ಎಂಬುದನ್ನು "ಡಂಗುರ ಪದಗಳು" ಗ್ರಂಥದ ಪದ-ಪದ್ಯದ ಮೊದಲನೆ ಚರಣದಲ್ಲಿ ಕಾಣುತ್ತೇವೆ. ಜೊತೆಗೆ ಸಿದ್ಧನ ನೆನೆದರೆ ಸಕಲ ಸಿದ್ಧಿಗಳುಂಟು ಬುದ್ಧಿಲಿಂದ----- ಎಂಬ ಪದ್ಯವನ್ನು ನೋಡಿದಾಗ ಕೂಡ ಇಂತಹ ಅಂಶಗಳು ಕಂಡು ಬರುತ್ತವೆ. ಆದಿ ಪ್ರಾಸ, ಅಂತ್ಯಪ್ರಾಸ, ಮಧ್ಯಪ್ರಾಸ ಅರ್ಥಗರ್ಭಿತವಾಗಿ ಬಳಕೆಯಾಗಿವೆ.

ಸಿದ್ಧನ ನೆನದರೆ ಸಕಲ ಸಿದ್ಧಿಗಳುಂಟು
ಬುದ್ಧಿಲಿಂದ ಗುರುವಿನ ನೆನದರ/ ಅಮರಪುರದ

ಸಿದ್ಧಶಿವಯೋಗಿ ರಾಯನ ನೆನೆದರ<sub>s</sub>

ಯೋಗಿಯ ನೆನಯಿರೊ. [೨]

ಶಿವಯೋಗಿರಾಯ ; ನಮಗೆ ತಂದೆ ನೀನು ತಾಯಿ ನೀನು ಬಂಧುಬಳಗವೆಲ್ಲ ನೀನೆ ಪ್ರೀತಿ ಪ್ರೇಮಾವತಾರವೆಲ್ಲ ನೀನೆ ಅದರ ಒಡೆಯನೆ ನೀನು ನಾವು ನಿನ್ನನ್ನೇ ನಂಬಿದ್ದೇವೆ. ನಾವು ಸಾಕಷ್ಟು ತಪ್ಪುಗಳನ್ನು ಮಾಡಿರಬಹುದು, ಅವುಗಳನ್ನು ಮನ್ನಿಸಿ ನಿನ್ನ ಕೃಪೆಗೆ ನಮ್ಮನ್ನು ಪಾತ್ರರನ್ನಾಗಿಸಿ ಕಾಪಾಡು ತಂದೆ ಎಂಬ ವಿನಮ್ರವಾಗಿ ಪ್ರಾರ್ಥಿಸುವ ಅಂಶವನ್ನು 'ನಿಮ್ಮ ನಂಬಿದೆವಯ್ಯಾ' ಎಂಬ ಪದದಲ್ಲಿ ಕಾಣುತ್ತೇವೆ. ಪ್ರಾಣ ನಿನ್ನದು ಅಭಿಮಾನ ನಿನ್ನದು ಎಂಬ ಉಕ್ತಿಯಿಂದ ಪ್ರಾರಂಭವಾಗುವ 'ಜಾಣ ಶಿವಯೋಗಿ ಲಿಂಗ' ಪದ್ಯ ತುಂಬ ನೀತಿಯಿಂದ ಕೂಡಿದೆ. 'ಹಾಲು ಹಾಲೆಂದುಳುದು ಈ ಲೋಕವು' ಪದ ಅಷ್ಟಪಾದಗಳಿಂದ ಕೂಡಿದೆ. ಚೆನ್ನಬಸವನನ್ನು ನೆನೆಯಬೇಕು, ಯಾವ ರೀತಿಯಲ್ಲಿ ನೆನೆಯಬೇಕು, ಯಾವ ರೀತಿಯಲ್ಲಿ ಚೆನ್ನಬಸವನಿದ್ದಾನೆ ಎಂಬ ಹೊಗಳಿಕೆಯನ್ನು ಕಾಣುತ್ತೇವೆ. 'ಚೆನ್ನಸವಣ್ಣ ಹೂಡಿದ ಹೂಟ', 'ಚೆನ್ನಬಸವನ ಬೇಡಿಕೊಳ್ಳಿ', ಪದಗಳ ಜೊತೆಗೆ 'ಸಂಭ್ರಮದ ಫಲಗಳುಂಟು' ಎಂಬ ಪದಗಳು ತುಂಬಾ ಮಾರ್ಮಿಕವಾಗಿವೆ.

'ಜೋಗುಳ ಪದ' ತುಂಬ ಸೊಗಸಾಗಿ ವರ್ಣಿತವಾಗಿದೆ. ದೇವನ ಸನ್ನಿಧಾನವೇ ತೊಟ್ಟಿಲು ಅದನ್ನು ಭಕ್ತಿಯಿಂದ ತುಂಬಿ ತೂಗಿರಿ ಎಂಬ ಭಕ್ತಿಯ ಜೋಗುಳ ತುಂಬ ಅರ್ಥಪೂರ್ಣವಾಗಿದೆ. 'ಗುರುವೆನಲುಬಹುದೇ' ಎಂಬ ಪದ ಉಪದೇಶವನ್ನು ನೀಡಿ ಉಂಡ ಮನೆಗೆ ದ್ರೋಹ ಬಗೆವ ಪಾಪಿಗೆ ಗುರುವೆಂದು ಕರೆಯಬಹುದೇ ಎಂಬ ಪ್ರಶ್ನೆಯೊಂದಿಗೆ ಪ್ರಾರಂಭವಾಗುತ್ತದೆ. ಗುರುವೆಂದು ಕರೆಯಿಸಿಕೊಂಡವರು, ಹಿರಿಯರೆನಿಸಿಕೊಂಡವರು, ಒಡೆಯರೆನಿಸಿಕೊಂಡವರು, ಮನೆಯ ಯಜಮಾನನೆನಿಸಿಕೊಂಡವರು, ಸರಿಯಾಗಿ ಇರಬೇಕು. ಎಂಬುದರ ಜೊತೆಗೆ 'ದೇವರ ಲೋಕದ ದೇವಗಣ ಹೊಗಳುತ' ಎಂಬ ಪದ್ಯದಿಂದ ಮುಕ್ತಾಯಗೊಳ್ಳುತ್ತದೆ.

'ನನ್ನ ನಾ ಹೊಗಳಿಕೊಂಬೆ' ಪದ್ಯದಲ್ಲಿ ನನ್ನನ್ನು ನಾನು ಹೊಗಳುತ್ತ ನಾನು ಅಳಿದು ಹೋಗುತ್ತಿರುವೆನು ನಿನ್ನನ್ನು ಅರ್ಥ ಮಾಡಿಕೊಳ್ಳುತ್ತಿಲ್ಲ, ಎಂಬ ಅಹಂಭಾವ ಹೋಗಲಾಡಿಸುವಿಕೆಯನ್ನು ಕಾಣುತ್ತೇವೆ. 'ತೀರ್ಥಪ್ರಸಾದ' ಪದ ಬಹಳ ತಾತ್ವಿಕತೆಯಿಂದ ಕೂಡಿದೆ. "ಹೊಲೆಯಲ್ಲವೇ' ಎಂಬ ಪದದಲ್ಲಿ ಕೆಟ್ಟದ್ದು ಯಾವುದು ತಿಳಿದು ನೋಡಬೇಕು ಎಂಬ ಅರ್ಥ

೨. "ಡಂಗುರ ಪದಗಳು" ಸಂಪಾದಕರು ಡಾ॥ ಎಂ. ಎಸ್. ವಾಲಿ ಪುಟ ೧ ಪ್ರ. ವರ್ಷ ೧೯೮೨

ವಂತಿಕೆಯನ್ನು ನೋಡುತ್ತೇವೆ. 'ಮೂಕೊರೆಯ ಮೂಳಿ ಮೂಳನು ನಾನು', 'ಮಂಗಳಾರತಿ', 'ಬಿಡಲಾರೆನು ಪರಿಸತಿಯ ಸಂಗವ', 'ಜಯಜಯ ಶಿವಯೋಗಿ ಚನ್ನಬಸವಾ' 'ಬೇಡಿಕೊಳ್ಳಿರೋ ಸ್ವಾಮೀಯ', ಪದಗಳು ಸತ್ವಯುತ ಪದಗಳಾಗಿವೆ. 'ಶಿವಯೋಗಿ ಶಾಂತ ಸದ್ಗುಣ ಶೀಲ' ಎಂಬ ಪದದಲ್ಲಿ ಶಿವಯೋಗಿಯ ಗುಣ ಸೌಂದರ್ಯವನ್ನು ಹಾಡಿ ಹೊಗಳಲಾಗಿದೆ.

ಎಂಥ ಯೋಗಿ ನೋಡ ಏಣಲೋಚನೆ
ಕಂತು ಆಗಮಬಲ್ಲ ।
ಪಂಥ ಯೋಗಿರಾಯ ಪರಮಶಿವಯೋಗಿ
ಶಾಂತ ಸದ್ಗುಣ ಶೀಲ

ಶಿವಯೋಗಿಶಾಂತ ಸದ್ಗುಣಶೀಲ [೩]

'ಸಾಲವುಟ್ಟಗಿ ಪ್ರಭುವೇ ಜೋಜೋ' ಪದದಲ್ಲಿ ಆತನನ್ನು ಲಾಲಿಹಾಡಿನ ಮೂಲಕ ಸ್ತುತಿಸುವುದನ್ನು ಕಾಣುತ್ತೇವೆ. ದೈವ ಭಕ್ತಿಯಿಂದ ಲಾಲಿ ಹಾಡಿನೊಂದಿಗೆ ದೈವತ್ವವನ್ನು ಹೊಂದುವುದನ್ನು ಕಾಣುತ್ತೇವೆ. ಉದಾ: ಬಸವ ಜಯಂತಿ, ಕೃಷ್ಣಜಯಂತಿ, ಮುಂತಾದ ದಿನಗಳಂದು ಹುಟ್ಟು, ಬಾಲ್ಯವನ್ನು, ದೈವತ್ವವನ್ನು ಜೋಗುಳದ ಮುಖಾಂತರ ಕಾಣುವುದನ್ನು ಆಚರಿಸುತ್ತಾ ಬಂದಿದ್ದೇವೆ.

ಇವು ಇಂದಿಗೂ ನಮ್ಮ ಸಂಸ್ಕೃತಿಯ ಪ್ರತೀಕವಾಗಿವೆ. ಇಂತಹ ವಿಶೇಷತೆ ಓಂದೆ ಡಂಗುರ ಪದಗಳಲ್ಲಿಯೂ ಕಾಣಸಿಗುತ್ತಿದೆ. ಇವು ದ್ವಿಪದಿಯಿಂದ ಕೂಡಿವೆ.

ರುದ್ರಕುಂಡಲ ರುದ್ರಾಕ್ಷೇಯ ಧರಿಸಿ ಅವರು
ಇದ್ದರು ಗುರುವಿನ ಶ್ರೀಪಾದ ಚರಣ ಜೋಜೋ
ಸನ್ನತಿಪುರಪತಿ ಹೊನ್ನ ಸೋಮನ ಕಂದ । ಅಯ್ಯ
ಚೆನ್ನಿಗ ಸಾಲವುಟ್ಟಗಿ ಪ್ರಭುವೇ ಜೋಜೋ

ಸಾಲವುಟ್ಟಗಿ ಪ್ರಭುವೇ ಜೋಜೋ [೪]

'ಶಿವಯೋಗಿರಾಯ ಬಂದನು' ಪದದಲ್ಲಿ ಶಿವಯೋಗಿಯ ಬರುವಿಕೆಯ ವರ್ಣನೆಯ ಮೂಲಕ ಭಕ್ತಿಯ ತೋರ್ಪಡಿಸುವಿಕೆಯನ್ನು ಕಾಣುತ್ತೇವೆ.

---

೩. ಡಂಗುರ ಪದಗಳು: ಸಂಪಾದನೆ ಡಾ॥ ಎಂ. ಎನ್. ವಾಲಿ ಪುಟ. ೬೫ ಪ್ರ. ವರ್ಷ ೧೯೮೨
೪. ಡಂಗುರ ಪದಗಳು: ಸಂಪಾದನೆ ಡಾ॥ ಎಂ. ಎನ್. ವಾಲಿ ಪುಟ. ೭೧ ಪ್ರ. ವರ್ಷ. ೧೯೮೨

ಹೀಗೆ "ಡಂಗುರ ಪದಗಳು" ಜ್ಞಾನವನ್ನು ಬೋಧಿಸುವ ಜ್ಞಾನದ ನಿಧಿಗಳಾಗಿವೆ. ನೀತಿಭೋಧನೆ ಮಾಡುವುದರ ಮೂಲಕ ನೈತಿಕ ಮೌಲ್ಯವನ್ನು ಪ್ರತಿಪಾದಿಸುತ್ತವೆ. ವೈರಾಗ್ಯವನ್ನುಂಟುಮಾಡುವ, ಭಕ್ತಿ ಪರತೆಯನ್ನುಂಟುಮಾಡುವ ಪದಗಳಾಗಿವೆ. ಈ ಶಿವಯೋಗೀಶ್ವರನ ಡಂಗುರ ಪದಗಳು ಹುಟ್ಟಿಕೊಂಡ ಬಗೆಯನ್ನು ಪ್ರಾಸ್ತಾವಿಕ ಭಾಗದಲ್ಲಿ ವಿವರಿಸಿದ್ದಾರೆ. ಈ ಡಂಗುರ ಪದಗಳು ಎಂಬ ವಿಶಿಷ್ಟ ಸಾಹಿತ್ಯ ಪ್ರಕಾರ ಕನ್ನಡ ಸಾಹಿತ್ಯದಲ್ಲಿ ಇದೇ ಪ್ರಥಮವಾಗಿ ಕಾಣಸಿಗುತ್ತದೆ. ಜನಪದ ಪದ್ಯಗಳು ಓದುವಾಗಿನಕ್ಕಿಂತ ಹಾಡುವಾಗ ಹೆಚ್ಚು ಸೊಗಸೆನಿಸುತ್ತವೆ ಎಂಬ ಮಾತು ಇಲ್ಲಿಯ ಪದ್ಯಗಳಿಗೂ ಅನ್ವಯವಾಗುತ್ತದೆ. ಇಂತಹ ವಿಶೇಷ ಸಾಹಿತ್ಯ ಪ್ರಕಾರವನ್ನು ಸಂಪಾದನೆ ಮಾಡಿದ ಡಾ. ಎಂ. ಎಸ್. ವಾಲಿಯರ ಕಾರ್ಯ ಬಹು ಶ್ಲಾಘನೀಯವಾಗಿದೆ.

**ಸಿರಿಗನ್ನಡ ಒಡಪುಗಳು:**

ಗಾದೆ ಒಗಟುಗಳಂತೆ 'ಒಡಪು' ಜನಪದ ಗದ್ಯ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾಗಿದೆ. ಗಂಡ ಹೆಂಡಂದಿರು ಪರಸ್ಪರ ಹೆಸರು ಹೇಳುವಾಗ ಬಳಸುವ ಚುಟುಕುಗಳೇ ಒಡಪುಗಳು. ಇಂತಹ ವಿಶೇಷ ಜನಪದ ಸಾಹಿತ್ಯ ಪ್ರಕಾರದ ಸಂಗ್ರಹ ಹಾಗೂ ಅದರ ವಿಮರ್ಶಾ ಕಾರ್ಯ ಮತ್ತು ಅವುಗಳ ಸ್ವಾರಸ್ಯವನ್ನು ಮನಗಾಣಿಸುವ ಕಾರ್ಯವು ತುಸು ತಡವಾಗಿ ಪ್ರಾರಂಭವಾಯಿತು. ಇಂತಹ ಸಂಗ್ರಹಣೆಯ ಮೊದಲ ಶ್ರೇಯಸ್ಸು ಶ್ರೀ ಈಶ್ವರಚಂದ್ರ ಚಿಂತಾಮಣಿಯವರಿಗೆ ಸಲ್ಲುತ್ತದೆ. ಅವರ "ಗರತಿಯರ ಮನೆಯಿಂದ" ಕೃತಿಯಲ್ಲಿ ಕೆಲವು ಒಡಪುಗಳು ಕಾಣಸಿಗುತ್ತವೆ. ಸಿ.ಪಿ.ಕೆ., ಜ್ಯೋತಿ ಹೊಸೂರ, ಡಾ.ಎಮ್.ಎಸ್.ಲಠ್ಠೆ, ಶ್ರೀರಾಮ ಬಿದರಿ ಮುಂತಾದ ಮೊದಲ ಪಂಕ್ತಿಯ ಮೂರು ನಾಲ್ಕು ಜನ ವಿದ್ವಾಂಸರ ತರುವಾಯ ಆ ಸಾಲಿನಲ್ಲಿ ಇನ್ನೊಂದು ಹೆಸರು ಸೇರಬೇಕಾದುದು ಡಾ. ಎಮ್. ಎಸ್. ವಾಲಿಯವರದು.

ಮದುವೆ, ಶೋಭನ, ಕೆಲವು ಹಬ್ಬಗಳ ಮಂಗಲಾಚರಣೆಗಳೊಂದಿಗೆ ಒಡಪುಗಳ ಸಂಬಂಧ ಕಂಡು ಬರುತ್ತದೆ. 'ಒಡಪು' ಕರ್ನಾಟಕದ ಜಿಲ್ಲೆಗಳಲ್ಲಿ ದೊರೆಯುವ ವಿಶಿಷ್ಟ ಸಾಹಿತ್ಯ. ವಿವಿಧ ಮಂಗಲ ಪ್ರಸಂಗಗಳಲ್ಲಿ ದಂಪತಿಗಳು ಪರಸ್ಪರ ಹೆಸರು ಹೇಳುವಾಗ ಓನ್ನಲೆಯಾಗಿ ಒಡಪನ್ನು ಬಳಸುವ ವಾಡಿಕೆ. ಇಂತಹ ವಿಶಿಷ್ಟ ಸಾಹಿತ್ಯದ ಸೊಬಗನ್ನು ಮನಗಂಡು ವಿಜಾಪೂರ, ಬೆಳಗಾವಿ ಜಿಲ್ಲೆಗಳ ಹಳ್ಳಿಗಳಲ್ಲಿ ಪ್ರಚಲಿತವಾಗಿರುವ ಸುಮಾರು ೫೦೦ ರಷ್ಟು ಒಡಪುಗಳನ್ನು ಸಂಗ್ರಹಿಸಿದ್ದಾರೆ. ೧೯೮೦ ರಿಂದ ೧೯೯೫ ರ ವರೆಗೆ ಶ್ರಮವಹಿಸಿ ಸಂಗ್ರಹಿಸಿದ ಅಧಿಕೃತ ಸಂಗ್ರಹವೇ 'ಸಿರಿಗನ್ನಡ ಒಡಪುಗಳು' ಎಂಬ ಸಂಕಲನ.

ಈ ಸಂಕಲನದಲ್ಲಿ ಹೆಣ್ಣುಮಕ್ಕಳ ಒಡಪುಗಳು ಮತ್ತು ಗಂಡಸರ ಒಡಪುಗಳು ಎಂಬ ವಿಭಾಗಗಳಿವೆ. ಮೊದಲ ವಿಭಾಗದಲ್ಲಿ ಹೆಣ್ಣುಮಕ್ಕಳಿಗೆ ಸಂಬಂಧಿಸಿದ ಒಡಪುಗಳನ್ನು ಕಾಣುತ್ತೇವೆ. ಅವುಗಳಲ್ಲಿ ಗಂಡಸರ ಗುಣಗಾನ, ಗಂಡಸರ ಮೊಂಡತನ ದೋಷ, ಆಭರಣಗಳ ವ್ಯಾಮೋಹ, ದೇವಧರ್ಮ, ನ್ಯಾಯನೀತಿ, ಸಂಬಂಧ, ಹಾಸ-ಪರಿಹಾಸ, ಆತ್ಮ ಪ್ರಶಂಸೆ ಮುಗ್ಧತೆ ಕ್ಷಮಾಪಣೆ, ಆಧುನಿಕತೆ, ಶುಭಶೋಭನ ಕಾರ್ಯವಿಧಾನಗಳು ಎಂಬ ಶಿರ್ಷಿಕೆಯನ್ನೊಳಗೊಂಡ ಭಾಗಗಳಿವೆ. 'ಶುಭಶೋಭನ ಕಾರ್ಯವಿಧಾನಗಳು' ಎಂಬ ೮ನೇ ಭಾಗದಲ್ಲಿ ೯ ಉಪವಿಭಾಗಗಳಿದ್ದು. ಅದರಲ್ಲಿ ೭೫ ಒಡಪುಗಳಿವೆ. ಇವೆಲ್ಲವೂ ಪತಿದೇವನನ್ನು ಅರ್ಚಿಸುವ ವಿಧಾನವನ್ನು ಅನುಸರಿಸಿವೆ. ಎರಡನೇ ಭಾಗವು ಗಂಡಸರ ಒಡಪುಗಳಿಂದ ಕೂಡಿದೆ. ೪೨೪ ಒಡಪುಗಳು ಹೆಂಗಸರವಾಗಿದ್ದರೆ ೬೫ ಒಡಪುಗಳು ಗಂಡಸರವಾಗಿವೆ. ಇಂತಹ ಅಪರೂಪದ ಸಂಗ್ರಹಕ್ಕೆ ಸಿಂಪಿ ಲಿಂಗಣ್ಣನವರು ಸುಂದರವಾದ ಮುನ್ನುಡಿಯನ್ನು ಬರೆದಿದ್ದಾರೆ.

ಭಾಗ ೧ ರಲ್ಲಿ ಹೆಂಗಸರ ಒಡಪುಗಳು, ಗಂಡನ ಗುಣಗಾನ ಮಾಡುವ ಒಡಪುಗಳು ಕಂಡು ಬರುತ್ತವೆ.

ಬಸವೇಶ್ವರರು ಮಾಡಿದ್ದು ಕರ್ನಾಟಕದ ಉದ್ಧಾರ

ಗಾಂಧೀಜಿಯವರು ಮಾಡಿದ್ದು ಹರಿಜನರ ಉದ್ಧಾರ

........ರು ಮಾಡುವರು ನನ್ನ ಉದ್ಧಾರ[೫] ಎಂಬ ಒಡಪಿನಿಂದ ಪ್ರಾರಂಭಗೊಳ್ಳುತ್ತದೆ. ತನ್ನ ಪತಿಯನ್ನು ಮಹಾನ್ ವ್ಯಕ್ತಿಗಳಿಗೆ ಹೋಲಿಸಿ ಹೇಳುವುದುಂಟು. ಇಲ್ಲಿ ಗಾಂಧೀಜಿಯವರಿಗೆ, ಬಸವೇಶ್ವರರಿಗೆ ತನ್ನ ಪತಿಯನ್ನು ಹೋಲಿಸಿಕೊಂಡು ಒಡಪು ಕಟ್ಟಿ ಹೆಸರು ಹೇಳಿರುವುದನ್ನು ಕಾಣುತ್ತೇವೆ. ವಾಲಿಯವರು ಸಂಗ್ರಹಿಸಿದ ಇಂತಹ ಹಲವಾರು ವಚನಗಳಲ್ಲಿ ಹೋಲಿಕೆ ಮಾಡಿ ಒಡಪು ಹೇಳುವುದರ ಜೊತೆಗೆ ದಾಂಪತ್ಯ ಪ್ರೇಮದ ಮಹತ್ವವನ್ನು ಎತ್ತಿ ತೋರಿಸುವ ಒಡಪುಗಳು ಕಂಡು ಬರುತ್ತವೆ. ಈ ಒಡಪುಗಳಲ್ಲಿ ಪ್ರಾಸಬದ್ಧತೆಯ ಲಕ್ಷಣವನ್ನು ಕಾಣುತ್ತೇವೆ. ಆದಿ ಅಂತ್ಯ ಪ್ರಾಸಗಳು ಕಂಡು ಬರುತ್ತವೆ. 'ಪ್ರಾಸವಿಲ್ಲದ ಪದವ ತಾಸು ಹಾಡಿದರೇನು' ಎಂಬಂತೆ ಪ್ರಾಸ ಕಟ್ಟಿ ಹೇಳಿದರೇನೇ ಒಡಪುಗಳು ಕೇಳಲು ಸೊಗಸೆನಿಸುತ್ತವೆ. ಅಂತಹ ಸೊಗಸು ಈ ಒಡಪುಗಳಲ್ಲಿ ಕಂಡು ಬರುತ್ತದೆ. ಹೀಗೆ ಗಂಡನ ಗುಣಗಾನ ಮಾಡುವ ೬೯ ಒಡಪುಗಳು ಸಂಗ್ರಹಗೊಂಡಿವೆ.

---

೫. ಸಿರಿಗನ್ನಡ ಒಡಪುಗಳು" ಸಂಪಾದನೆ:ಡಾ॥ಎಂ.ಎಸ್.ವಾಲಿ. ಪುಟ ೧ ಪ್ರ.ವರ್ಷ೧೯೮೫(ತೃ. ಮುದ್ರಣ)

ಗಂಡನ ಮೊಂಡತನ ದೋಷ ವಿಭಾಗದಲ್ಲಿ ಮಾತು ಒಂದಿಷ್ಟು ತುಟಿಮೀರಿ ನುಸುಳಿದರೂ ಕ್ಷಮ್ಯವೇ. ಕಾಂತೆಯ ಮಾತು ಕಾವ್ಯ ಮಾತೆ ಆಗಿರುವುದರಿಂದ ಗಂಡನ ಮೊಂಡುತನಕ್ಕೂ ಒಂದು ಕಳೆ ಬರುತ್ತದೆ.[೬]

ಸಣ್ಣಕ್ಕಿ ತರಲಿಲ್ಲ: ದೊಡ್ಡಕ್ಕಿ ಉಣ್ಣಲಿಲ್ಲ
ಮನ್ಯಾಗ ಇರಲಿಲ್ಲ: ಮಾತು ಕೇಳಲಿಲ್ಲ
ಇದ್ದಿದ್ದು ಉಣ್ಣಂದ್ರ ಎದ್ದೆದ್ದು ಹೋಗತಾರ--------[೭]

ಹಾಲಿಗೆ ಹಾಕೂದು ಹೆಪ್ಪು
ಊಟಕ್ಕೆ ರುಚಿ ಉಪ್ಪು
ನನ್ನ ಮ್ಯಾಲ-----ರು
ಮತ್ತೊಬ್ಬಾಕಿನ್ನ ಮಾಡಿಕೊಂಡಿದ್ದು ಭಾಳ ತಪ್ಪು. [೮]

ಪತಿಯ ಸಿಟ್ಟನ್ನು ಪ್ರೀತಿಯಿಂದ ವರ್ಣಿಸುವುದರ ಜೊತೆಗೆ ಸಮಾಜದ ಲೋಪದೋಷಗಳ ಚಿತ್ರಣವನ್ನು ಕಾಣುತ್ತೇವೆ. ಇದು ತಪ್ಪು ಎಂಬ ತಪ್ಪಿನ ಅರಿವನ್ನು ಮೂಡಿಸುತ್ತದೆ. ಇಂತಹ ಸುಮಾರು ೨೫ ಒಡಪುಗಳು ಈ ಸಂಗ್ರಹದಲ್ಲಿ ಕಂಡು ಬರುತ್ತವೆ.

ಆಭರಣಗಳ ವ್ಯಾಮೋಹ ಭಾಗದಲ್ಲಿ ಇಪ್ಪತ್ತೊಂಭತ್ತು ಒಡಪುಗಳಿವೆ. ಮೂಲತಃ ಸ್ತ್ರೀಗೆ ಆಭರಣಗಳ ವ್ಯಾಮೋಹ ಇದ್ದುದ್ದು ಕಂಡು ಬರುತ್ತದೆ. ಮೊಂಡು ಗಂಡನ ಮುಂದೆ ಆಭರಣಗಳ ವ್ಯಾಮೋಹವನ್ನು ಹೇಳಿಕೊಳ್ಳುವುದು ಸಹಜ. ಪತಿಗೆ ಸಿಟ್ಟು ಬಾರದಂತೆ ವ್ಯಕ್ತಪಡಿಸುವಂತಹ ಸಂದರ್ಭವೂ ಉಂಟು. ಪತಿಯನ್ನು ವರ್ಣಿಸುವುದರ ಜೊತೆಗೆ ಆಭರಣಗಳ ಮೇಲಿನ ಆಸೆಯನ್ನು ವ್ಯಕ್ತಪಡಿಸುವುದಾಗಿದೆ.

ಹೌದನ್ನೋ ಮಾತಿಗೆ ಹೌದಂತಾರ
ಅಲ್ಲನ್ನೋ ಮಾತಿಗೆ ಅಲ್ಲಂತಾರ
ಬಂಗಾರ ಬೇಡಿದರ ದಂಗ ಆಗತಾರ. [೯]

ತನ್ನಲ್ಲಿ ಆಭರಣಗಳ ವ್ಯಾಮೋಹವಿದ್ದರೂ ದೇವ-ಧರ್ಮ-ನ್ಯಾಯ-ನೀತಿ-ಸಂಬಂಧಗಳಲ್ಲಿ ಆಸಕ್ತಿವಹಿಸುವುದು ಹೆಣ್ಣಿನಲ್ಲಿ ಹೆಚ್ಚಿನ ವಾಡಿಕೆ. ತನ್ನೊಡನೆ ಗಂಡನು ಸಹಭಾಗಿ

---

೬. ಸಿರಿಗನ್ನಡ ಒಡಪುಗಳು" ಸಂಪಾದನೆ:ಡಾ॥ಎಂ.ಎಸ್.ವಾಲಿ. ಪುಟ ೬ ಸಿಪಿ ಲಿಂಗಣ್ಣ ಮುನ್ನುಡಿಯಿಂದ ಪ್ರ. ವರ್ಷ ೧೯೮೫
೭. ಸಿರಿಗನ್ನಡ ಒಡಪುಗಳು" ಸಂಪಾದನೆ:ಡಾ॥ಎಂ.ಎಸ್.ವಾಲಿ. ಪುಟ ೩೭ ಪ್ರವರ್ಷ ೧೯೮೫
೮. ಸಿರಿಗನ್ನಡ ಒಡಪುಗಳು" ಸಂಪಾದನೆ;ಡಾ॥ಎಂ.ಎಸ್.ವಾಲಿ. ಪುಟ ೩೯ ಪ್ರ ವರ್ಷ ೧೯೮೫
೯. ಸಿರಿಗನ್ನಡ ಒಡಪುಗಳು: ಸಂಪಾದನೆ ಡಾ॥ ಎಂ.ಎಸ್. ವಾಲಿ ಪುಟ ೪೦ ಪ್ರವರ್ಷ ೧೯೮೫

ಯಾದರಂತೂ ಹೆಣ್ಣಿಗೆ ಮುಗಿಲು ಮೂರೇ ಗೇಣಾಗುವುದು. ಇದಕ್ಕೆ ಸಂಬಂಧಿಸಿದಂತೆ ಈ ಭಾಗದಲ್ಲಿ ೪೬ ಒಡಪುಗಳಿವೆ.

ಮಲಮಲ ಅಂಗಿ ಮೈಯಾಗ
ಮಲ್ಲಿಗಿ ಹೂವ ಕೈಯಾಗ
ಮಲ್ಲಮ್ಮನಂಥಾ ಮಡದಿನ್ನ ಕರಕೊಂಡು
ಮಲ್ಲಯ್ಯನ ಗುಡಿಗೆ ಹೋಗತಾರ: [೧೦]

ಒಡಪು ಎನ್ನುವುದು ಹುಟ್ಟಾ ಸರಸ. ಅದಕ್ಕೆ ಹಾಸವೋ-ಪರಿಹಾಸವೋ ಸೇರಿದರೆ ಕೇಳಿದವರಿಗೆ ಕಚ್ಚಾಡಿಸಿದಂತಾಗುತ್ತದೆ. ಬಿದ್ದು ಬಿದ್ದು ನಗಬೇಕೋ. ನಕ್ಕು ನಕ್ಕು ಬೀಳಬೇಕೋ ಎಂಬುವಂತಹ ಹಾಸ್ಯದ ರಸದ ಪ್ರತಿಪಾದನೆಯನ್ನು ಒಡಪುಗಳಲ್ಲಿ ಕಾಣುತ್ತೇವೆ. ಇಂತಹ ಸುಮಾರು ೬೨ ಒಡಪುಗಳು ಸಂಗ್ರಹಗೊಂಡಿವೆ.

ಕಟ್ಟೆ ಮ್ಯಾಲ ಕಟ್ಟಿ
ಕುಂಬಳಕಾಯಿ ಸೊಟ್ಟಿ
ಸಂಜೆತನಕ ಬಿಟ್ಟಿ
.......ಹೆಸರು ಹೇಳ್ಯಾಕ ನಾ ಜಾಳ ಘಟ್ಟಿ [೧೧]

ಇಂದಿನ ಒಡಪುಗಳಲ್ಲಿ ಆಧುನಿಕತೆಯೂ ಜೀವಾಳವಾಗಿದೆ. ಇಂತಹ ಕೆಲವು ಒಡಪುಗಳನ್ನು ವಾಲಿಯುವರು ತುಂಬಾ ಸೊಗಸಾಗಿ ಹೇಳುತ್ತಾರೆ.

ಗುಂಗುರ ಗೂದಲ
ಬಂಗಾರ ಬೇತಲ
ಬಂಗ್ಲೇದಾಗ ಕುಂತು ಇಂಗ್ಲೀಷ ಬರೀತಾರ [೧೨]
ಮೆಂತೆದ ಓಟ್ಟಿ, ತುಪ್ಪದ ಸಟ್ಟಿ
ಎಂಥವರ ಮಗಳು ಅಂತ ಸಂತಸ ಪಡತಾರ [೧೩]

ಹೀಗೆ ಅತ್ತೆ ಪ್ರಶಂಸೆ ಮುಗ್ಧತೆ ಕ್ಷಮಾಪಣೆಗೆ ಸಂಬಂಧಿಸಿದಂತೆ ೭೧ ಹಾಗೂ ಆಧುನಿಕತೆಗೆ ಸಂಬಂಧಿಸಿದಂತೆ ೪೨ ಒಡಪುಗಳು ಇವೆ.

ಶುಭಶೋಭನ ಕಾರ್ಯಕ್ರಮಗಳಲ್ಲಿ ಒಡಪುಗಳನ್ನು ಹೇಳುವುದನ್ನು ಕಾಣುತ್ತೇವೆ. ಈ ಕಾರ್ಯಕ್ರಮಗಳು ಬೇಗ ಬೇಗನೆ ಅವಸರದಲ್ಲಿ ನಡೆಯಬೇಕಾಗುತ್ತವೆ. ಪತಿದೇವರ ಕಾಲು

---

೧೦. ಸಿರಿಗನ್ನಡ ಒಡಪುಗಳು: ಸಂಪಾದನೆ ಡಾ॥ ಎಂ.ಎನ್ .ವಾಲಿ ಪುಟ ೪೪ ಪ್ರ.ವರ್ಷ ೧೯೮೫
೧೧. ಸಿರಿಗನ್ನಡ ಒಡಪುಗಳು: ಸಂಪಾದನೆ ಡಾ॥ ಎಂ.ಎನ್. ವಾಲಿ ಪುಟ ೪೯ ಪ್ರ.ವರ್ಷ ೧೯೮೫
೧೨. ಸಿರಿಗನ್ನಡ ಒಡಪುಗಳು: ಸಂಪಾದನೆ ಡಾ॥ ಎಂ.ಎನ್. ವಾಲಿ ಪುಟ ೬೯ ಪ್ರ.ವರ್ಷ ೧೯೮೫
೧೩. ಸಿರಿಗನ್ನಡ ಒಡಪುಗಳು: ಸಂಪಾದನೆ ಡಾ॥ ಎಂ.ಎನ್. ವಾಲಿ ಪುಟ ೬೨ ಪ್ರ.ವರ್ಷ ೧೯೮೫

ತೊಳೆಯುವುದಾಗಲಿ, ಹಣೆಗೆ ಕುಂಕುಮ ಬೊಟ್ಟು ಇಡುವಾಗ ಆಗಲಿ, ಕೈ ವೇಗವು ಬಾಯಿ ವೇಗವನ್ನು ಹಿಂಬಾಲಿಸದೇ ಗತ್ಯಂತರವಿಲ್ಲ. ಅಂತಹ ಸಂದರ್ಭದಲ್ಲಿ ಒಡಪು ಸಹ ವಿಶೇಷ ಸಿಂಗರಗೊಳ್ಳದೆ ಕೇವಲ ಪ್ರಾಸಿನ ಚುಂಬಕವನ್ನು ಮಾತ್ರ ಹೊತ್ತು ತರುವುದು ಅನಿವಾರ್ಯವಾಗುತ್ತದೆ. ಸುಮಾರು ೭೭ ಒಡಪುಗಳು ಇಲ್ಲಿ ಸಮಾವೇಶಗೊಂಡಿವೆ. ಉದಾಹರಣೆಗೆ:

ಲಗ್ನ ಬಂಧನದಿಂದ ಸತಿ ಪತಿಯರ ಸಮಾಗಮ
..............................ರಿಗೆ ಹಚ್ಚುವೆ ಕುಂಕುಮ [೧೪]

ಭಾಗ ೨ರಲ್ಲಿ ಗಂಡಸರ ಒಡಪುಗಳನ್ನು ಕಾಣುತ್ತೇವೆ ಇದರಲ್ಲಿ ೬೫ ಒಡಪುಗಳು ಸಂಗ್ರಹಗೊಂಡಿವೆ. ಹೆಣ್ಣು ಮಕ್ಕಳು ರಾಯರಿಗೆ ಶೆಟ್ಟರಿಗೆ ಒಪ್ಪುವಂತೆ, ಪತಿದೇವರಿಗೆ ಭೂಷಣವಾಗುವಂತೆ ರಾಜಮನ್ನಣೆಯ ಬಹುವಚನ ಬಳಸಿದ ಒಡಪುಗಳನ್ನು ಹೇಳಿದರೆ ಗಂಡು ಮಕ್ಕಳು ಮಾತ್ರ ಯಾವ ವ್ಯಾಕರಣದಲ್ಲಿಯೂ ಇಲ್ಲದ ಅರೆ ವಚನಗಳನ್ನು ಉಪಯೋಗಿಸುವ ಪರಿಪಾಠವನ್ನು ಕೆಲವೊಂದು ಸಂದರ್ಭದಲ್ಲಿ ಕಾಣುತ್ತೇವೆ. ಹೆಸರಿನಲ್ಲಿಯೂ ಮೊಟಕಾಗಿ ಸಂಭೋದನೆ ಮಾಡುವುದುಂಟು. ಉದಾ: ಗಂಗಾ ಇದ್ದದ್ದು ಗಂಗಿ, ಬಸ್ಸಕ್ಕಾ ಇದ್ದದ್ದು ಬಸ್ಸಿ, ಕಲ್ಲಮ್ಮ ಇದ್ದಲ್ಲಿ ಕಲ್ಲಿ ಇತ್ಯಾದಿ ಕೈ ಹಿಡಿದವಳು ಒಂದೇ ಕ್ಷಣ ಕೈ ಬಿಟ್ಟು ಪತಿದೇವರ ನಾಲಗೆಯಲ್ಲಿ ಸೇರಿದ ಸುಂಕು ಮುಳ್ಳಿನಂತೆ ಕಿತ್ತು ಹಾಕದೆ ಈ ಅನಾಥತೆಯು ಕೊನೆಗಾಣುವಂತಿಲ್ಲ.[೧೫] ಎಂಬ ಸಿಂಪಿ ಲಿಂಗಣ್ಣನವರ ಮುನ್ನುಡಿಯ ಮಾತು ಮಾರ್ಮಿಕವಾಗಿದೆ.

ಜಡಿ ಹಿಡಿದು ಜಗ್ಗಿದರ
ಮಡಿ ಮಡಿ ಅಂತ ಮೈಮ್ಯಾಲ ಬೀಳತಾಳ [೧೬]

ಇಸ್ಪೇಟಿನ ಎಲೆಗಳಿಗೆ ಬಣ್ಣ ಬರೆದಿದ್ದರೂ ಮುದ್ರೆ ಮಾತ್ರ ನಾಲ್ಕು. ಐವತ್ತೆರಡು ಎಲೆಗಳು ಒಂದರಂತೆ ಒಂದಿಲ್ಲ. ರಾಜರಾಣಿಯರಿಂದ ದುರಿತಿಯವರೆಗೆ ಇಳಿದು ಬಂದರೂ ಎಲ್ಲ ಎಲೆಗಳ ಆಟಕ್ಕೆ ಅತ್ತಗತ್ತ ಯಾವುದನ್ನೂ ಕಳೆದುಕೊಳ್ಳುವಂತಿಲ್ಲ. ಅದೇ ಬಗೆಯಲ್ಲಿ 'ಸಿರಿಗನ್ನಡ ಒಡಪುಗಳು' ನಮಗೆ ಕಂಡು ಬರುತ್ತವೆ ಎಂದು ಸಿಂಪಿ ಲಿಂಗಣ್ಣನವರು ಈ ಗ್ರಂಥದ ಬಗ್ಗೆ ಹೇಳಿರುವುದು ತುಂಬಾ ಸಮಂಜಸವಾಗಿದೆ. ಸುಸಂಬದ್ಧತೆಯ ಕೊರತೆಗೂ ಮರಾಠಿಯ ದೋಷಕ್ಕೂ ಉದಾಹರಣೆ ಆಗಬಲ್ಲ ಒಡಪುಗಳು ಈ ಸಂಗ್ರಹದಲ್ಲಿ ಕಂಡು ಬರುತ್ತವೆ. ಇದು ಒಂದು ರೀತಿಯಲ್ಲಿ ಈ ಗ್ರಂಥದ ಸೊಗಸಿಗೆ ಕಾರಣವಾಗಿದೆ.

---

೧೪. ಸಿರಿಗನ್ನ ಒಡಪುಗಳು: ಸಂಪಾದನೆ ಡಾ॥ಎಂ.ಎನ್.ವಾಲಿ ಪುಟ ೭೪ ಪ್ರ ವರ್ಷ ೧೯೮೫
೧೫. ಸಿರಿಗನ್ನ ಒಡಪುಗಳು: ಸಂಪಾದನೆ ಡಾ॥ಎಂ.ಎನ್.ವಾಲಿ ಪುಟ ೮೯ ಪ್ರ ವರ್ಷ ೧೯೮೫
೧೬. ಸಿರಿಗನ್ನ ಒಡಪುಗಳು: ಸಂಪಾದನೆ ಡಾ॥ಎಂ.ಎನ್.ವಾಲಿ ಪುಟ ೮೮ ಪ್ರ ವರ್ಷ ೧೯೮೫

ಇಂದಿನದು ವಿಜ್ಞಾನದ ಯುಗವಾಗಿದೆ. ಅವಸರದ ಬದುಕಾಗಿದೆ. ಇತ್ತೀಚಿನ ಶುಭ ಸಮಾರಂಭದ ವಿಧಿವಿಧಾನಗಳೆಲ್ಲ ಸಂಕಿಪ್ತಗೊಳ್ಳತೊಡಗಿವೆ. ಹೀಗಾಗಿ ಒಡಪು ಹಾಕಿ ಹೆಸರು ಹೇಳುವ, ಕೇಳುವ ಸಂಪ್ರದಾಯಕ್ಕೆ ಚ್ಯುತಿ ಬರತೊಡಗಿದೆ. ಇವು ಅಳಿದು ಹೋಗುವ ಮುನ್ನ ಉಳಿಸಿಕೊಳ್ಳಸಿಕೊಳ್ಳಬೇಕು. ನಮ್ಮ ಸಂಸ್ಕೃತಿಯ ಸಜೀವ ಸಂಪತ್ತಿನ ಭಾಗವಾಗಿ ಒಡಪುಗಳನ್ನು ರಕ್ಷಿಸುವುದು ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಎಂ. ಎಸ್. ವಾಲಿಯವರ ಪ್ರಯತ್ನ ಪೂರ್ವಕ ಸಾಹಿತ್ಯ ಸೇವೆ ಗಮನಾರ್ಹವಾಗಿದೆ.

**"ಜಾನಪದ ಒಗಟುಗಳು"**

"ಜಾನಪದ ಒಗಟುಗಳು" ಡಾ. ಎಂ.ಎಸ್. ವಾಲಿಯವರ ಮತ್ತೊಂದು ಜಾನಪದ ಕೃತಿ. ಭುವನೇಶ್ವರಿ ಪ್ರಕಾಶನ ಸಂಸ್ಥೆಯಿಂದ ಪ್ರಕಟನೆಗೊಂಡಿತು. ಈ ಕೃತಿಯು ಇದುವರೆಗೆ ಮೂರು ಮುದ್ರಣಗಳನ್ನು ಕಂಡಿದೆ. ಡಾ. ಆರ್. ಸಿ. ಹೀರೆಮಠ ಅವರು ಸೊಗಸಾದ ಮುನ್ನುಡಿಯನ್ನು ನೀಡಿದ್ದಾರೆ. ಒಗಟುಗಳ ಸಂಗ್ರಹ ಕಾರ್ಯವನ್ನು ವಾಲಿಯವರು ಅತ್ಯಂತ ವ್ಯವಸ್ಥಿತ ರೀತಿಯಿಂದ ಮಾಡಿದ್ದಾರೆ. ಜೊತೆಗೆ ಶಾಸ್ತ್ರೀಯವಾಗಿ ಅವುಗಳನ್ನು ವರ್ಗೀಕರಿಸಿದ್ದಾರೆ. ಹಾಗೂ ಅವುಗಳಿಗೆ ಉತ್ತರಿಸಿದ್ದಾರೆ. ಒಗಟುಗಳ ವಿಭಜನೆ, ಅವುಗಳಿಗೆ ನೀಡಿರುವ ಅರ್ಥದ ಕಲ್ಪನೆ ಇವುಗಳನ್ನು ನೋಡಿದರೆ ಇದೊಂದು ಮಾದರಿಯ ಸಂಪಾದನೆಯೆಂದು ತೋರುತ್ತದೆ.

'ಒಗಟು' ಜಾನಪದ ಗದ್ಯ ಸಾಹಿತ್ಯದ ಒಂದು ಪ್ರಕಾರ. ಇದು ಗದ್ಯವೆನಿಸಿದರೂ ಹಲವೆಡೆಗಳಲ್ಲಿ ಪದ್ಯದಂತೆಯೇ ಕಂಡುಬರುತ್ತದೆ. ಇಲ್ಲಿ ಹೇಳುವ ಹಾಗೂ ಪ್ರತಿಯಾಗಿ ಉತ್ತರಿಸುವ ಎರಡು ಪಂಗಡಗಳಿರುತ್ತವೆ. ದಿನದ ಬೇಕಾದ ವೇಳೆಯಲ್ಲಿ ದುಡಿಮೆಯೊಂದಿಗೆ ಇದು ಸಾಗಬಹುದು ಅಥವಾ ವಿಶ್ರಾಂತಿಯ ವೇಳೆಯಲ್ಲಿ ನಡೆಯಬಹುದಾದ ಒಂದು ಕ್ರಿಯೆಯಾಗಿದೆ.

ಒಗಟಿನ ಉಗಮ, ವಿಕಾಸ, ಪ್ರಸರಣ, ಪರಿಸರ, ಪ್ರಕಾರ, ಅರ್ಥ ಮತ್ತು ವ್ಯತ್ಯಯ ಮುಂತಾದವುಗಳ ಬಗ್ಗೆ ವಿದ್ವಾಂಸರ ಭಿನ್ನಾಭಿಪ್ರಾಯಗಳೇನೇ ಇದ್ದರೂ ಒಗಟುಗಳು ನೋವು, ನಲಿವು, ಆಸರೆ ಬೇಸರಗಳಲ್ಲಿ ಅಷ್ಟೆ ಅಲ್ಲದೆ ತಾತ್ವಿಕ ಜಿಜ್ಞಾಸೆಯ ಪರಮ ಸಾಧನಗಳಾಗಿಯೂ ಬೌದ್ಧಿಕ ಪರೀಕ್ಷೆಗೆ ಒರೆಗಲ್ಲಾಗಿಯೂ ಬಳಕೆಯಾಗುತ್ತಿದೆ. ಒಗಟುಗಳ ಕಲ್ಪನೆ ರಂಜನೀಯವಾಗಿದೆ. ಅವರವರ ಆಚಾರ, ವಿಚಾರ, ನಡೆ, ನುಡಿ, ನಂಬಿಕೆಗಳು ಮುಂತಾದ ಸಾಂಸ್ಕೃತಿಕ ಸಂಗತಿಗಳನ್ನು ಕುರಿತು ತೋರುವ ಎಳೆಗಳಾಗಿವೆ. ಗೂಢವಾದ ಬದುಕಿನ ಅರ್ಥವನ್ನು ನಿಗೂಢವಾಗಿಟ್ಟುಕೊಂಡು ಒಗಟುಗಳು ಮನರಂಜನೆ, ವಿನೋದ, ಹಾಸ್ಯ, ವಿಡಂಬನೆಗಳ ಸಾಧನಗಳೂ ಆಗಿವೆ.

ಜನಸಾಮಾನ್ಯರ ಬುದ್ಧಿಶಕ್ತಿಯನ್ನು ಅಭ್ಯಾಸಿಸುವ ಒಗಟುಗಳ ಸಂಗ್ರಹ, ವಿಮರ್ಶೆ, ಸುಮಾರು ಇಪ್ಪತ್ತು ವರ್ಷಗಳಿಂದ ಸಾಗುತ್ತಾ ಬಂದಿದೆ. ಹೊಸಗನ್ನಡ ಕಾಲದ ಒಗಟುಗಳಿಗೆ ಸಂಬಂಧಿಸಿದ ವಿಮರ್ಶೆ, ಮುನ್ನುಡಿ, ಹಿನ್ನುಡಿ, ಪ್ರಸ್ತಾವಣೆಗಳ ರೂಪದಲ್ಲಿಯೇ ಸೃಷ್ಟಿಯಾಗುತ್ತ ಬಂದಿವೆ. ಶ್ರೀ ಜಿ.ಶಂ.ಪರಮಶಿವಯ್ಯನವರ "ಕನ್ನಡ ಒಗಟುಗಳು", ಶ್ರೀ ರಾಗೌ ಅವರ "ನಮ್ಮ ಒಗಟುಗಳು", ಶ್ರೀ ಸುಧಾಕರ ಅವರ "ಜನಪದ ಒಡಗಿನ ವಚನಗಳು" ಉದಾಹರಣೆಗಳಾಗಿವೆ. ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿರುವ ಜನಪದ ಸಾಹಿತ್ಯದ ಕೊಡುಗೆಗೆ ಮಾರು ಹೋಗಿ ವಿಜಾಪೂರ, ಬೆಳಗಾವಿ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಆರುನೂರರಷ್ಟು ಒಗಟುಗಳನ್ನು ಸಂಗ್ರಹ ಮಾಡಿ "ಜಾನಪದ ಒಗಟುಗಳು" ಎಂಬ ಸಂಗ್ರಹವನ್ನು ವಾಲಿಯವರು ಪ್ರಕಟಿಸಿದ್ದಾರೆ.

"ಜಾನಪದ ಒಗಟುಗಳು" ಸಂಗ್ರಹದ ಪ್ರಸ್ತಾವನೆ ಬಹು ಅರ್ಥವಂತಿಕೆಯಿಂದ ಕೂಡಿದೆ. ಒಗಟಿನ ಸಮಾನಾರ್ಥಕ ಪದಗಳ ಬಗ್ಗೆ ವಿವರಣೆ ಕೊಟ್ಟಿದ್ದಾರೆ. ಒಗಟಿನ ಸ್ವರೂಪ ಮತ್ತು ಲಕ್ಷಣಗಳ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಒಗಟುಗಳ ಬಗೆಗಿರುವ ಕನ್ನಡ ವಿದ್ವಾಂಸರ ವಿಚಾರಗಳನ್ನೆಲ್ಲಾ ಇಲ್ಲಿ ಉಲ್ಲೇಖಿಸಿದ್ದಾರೆ. ಜೊತೆಗೆ ಒಗಟುಗಳ ಐತಿಹಾಸಿಕ ಪರಂಪರೆಯ ಬಗ್ಗೆ ಸಮಗ್ರವಾಗಿ ವಿಶ್ಲೇಷಿಸಿದ್ದಾರೆ. "ಜಾನಪದ ಒಗಟುಗಳು" ಸಂಗ್ರಹವು ಶಾಸ್ತ್ರೀಯವಾಗಿ ವರ್ಗೀಕರಣವಾಗಿರುವುದು ಕಂಡುಬರುತ್ತದೆ. ಪ್ರತಿಯೊಂದು ಅಧ್ಯಾಯವು ಪ್ರತಿಯೊಂದು ವರ್ಗೀಕರಣಕ್ಕೆ ಸಂಬಂಧಿಸಿದುದಾಗಿದೆ. ಹೀಗೆ ವಿವಿಧ ವರ್ಗೀಕರಣಗಳ ಒಂಭತ್ತು ಅಧ್ಯಾಯಗಳು ಅವುಗಳಿಗೆ ಸಂಬಂಧಿಸಿದಂತೆ ಉತ್ತರಗಳು ಶಬ್ದಕೋಶ ಸಹಿತ ವಿವರಣೆ ಕಂಡು ಬರುತ್ತದೆ. ಪ್ರಾಕೃತಿಕ ವಸ್ತುಗಳು, ಜೀವಜಗತ್ತು, ಒಗಟುಗಳಲ್ಲಿ ವಿನೋದ, ಅಶ್ಲೀಲ ಆವರಣ, ಗಣಿತ, ಜಾಣ್ಮೆ ಹಾಗೂ ಪ್ರಶ್ನೋತ್ತರ ಒಗಟುಗಳು ಎಂಬ ಶೀರ್ಷಿಕೆಯ ೯ ಅಧ್ಯಾಯಗಳು ಇಲ್ಲಿವೆ.

ಪ್ರಾಕೃತಿಕ ವಸ್ತು ಕ್ರಿಯೆಗೆ ಸಂಬಂಧಿಸಿದಂತೆ ಮೊದಲನೆ ಅಧ್ಯಾಯದಲ್ಲಿ ಮೊದಲ ವರ್ಗೀಕರಣ ಮಾಡಿ ಸುಮಾರು ೬೧ ಒಗಟುಗಳನ್ನು ಸಂಗ್ರಹಿಸಿದ್ದಾರೆ.

ಅಪ್ಪಗ ಹಾಸಗಿ ಹಾಸಲಾಕ ಬರೂದಿಲ್ಲ
ಅವ್ವಗ ಕಡಬ ಎಣಸಾಕ ಬರುದಿಲ್ಲ.

ಕರಕ ನೀರ ಕುಡಿಯಲಾರೆ: ಬಿದರ ಬೆತ್ತ ಓಡಿಯಲಾರೆ
ನೆಗ್ಗಿನ ಮುಳ್ಳು ತುಳಿಯುಲಾರೆ ನೀಲಿ ಗುಡಿಯ ಸುತ್ತಲಾರೆ. [೧೭]

೧೭. ಜಾನಪದ ಒಗಟುಗಳು: ಸಂಪಾದಕರು ಡಾ|| ಎಂ. ಎಸ್. ವಾಲಿ ಪುಟ ೨೫-೨೬ ಪ್ರ.ತೃತೀಯ ಮುದ್ರಣ-೨೦೦೩

ಇಲ್ಲಿ ಆಕಾಶ ನಕ್ಷತ್ರಗಳು ರಕ್ತ, ಹಾವು, ಚೇಳು ಮುಂತಾದ ಪ್ರಾಕೃತಿಕ ವಸ್ತುಗಳಿಗೆ ಸಂಬಂಧಿಸಿದ ಒಗಟುಗಳಿವೆ. ಹಾಸಿಗೆಗೆ ಆಕಾಶವನ್ನು ಕಡಬುಗಳಿಗೆ ನಕ್ಷತ್ರಗಳನ್ನು ಹೋಲಿಸಿದ್ದಾರೆ. ಹಾಗೆಯೇ ಕರಕ ನೀರು ಎಂದರೆ ರಕ್ತ ಅದನ್ನು ಕುಡಿಯಲು ಸಾಧ್ಯವಿಲ್ಲ. ಬಿದಿರು ಬೆತ್ತ ಎಂದರೆ ಹಾವು ಅದನ್ನು ಹಿಡಿಯಲು ಆಗುವುದಿಲ್ಲ. ನೆಗ್ಗಿನ ಮುಳ್ಳು ಎಂದರೆ ಚೇಳು ಅದನ್ನು ತುಳಿಯಲು ಸಾಧ್ಯವಿಲ್ಲ. ಕಾರಣ ಅದು ತನ್ನ ಕೊಂಡಿಯಿಂದ ಕುಕ್ಕಿ ಬಿಡುತ್ತದೆ. ಅದರ ನೋವು ಸಹಿಸಲಾರದಂತಹುದ್ದು. ನೀಲಿ ಗುಡಿ ಎಂದರೆ ಆಕಾಶ ಅದನ್ನು ಯಾರಿಂದಲೂ ಸುತ್ತು ಹಾಕಲೂ ಸಾಧ್ಯವಿಲ್ಲ ಎನ್ನುವ ಪ್ರಕೃತಿಯ ಸತ್ಯಾಸತ್ಯತೆಯನ್ನು ಮಾರ್ಮಿಕವಾಗಿ ಒಗಟುಗಳಲ್ಲಿ ಕಂಡುಕೊಳ್ಳುತ್ತೇವೆ.

ಸಸ್ಯ ಸಂಪತ್ತುಗಳ ಕುರಿತಾದ ಒಗಟುಗಳ ಸಂಗ್ರಹವನ್ನು ಎರಡನೇ ಅಧ್ಯಾಯದಲ್ಲಿ ಕಾಣುತ್ತೇವೆ.

ಹಚ್ಚನ್ನಾಕಿ ಪುಚ್ಚ ತೆರೆದಾಕಿ
ಕಲ್ಲ ಮ್ಯಾಲಿಟ್ಟು ಕಾರ ಅರದಾಕಿ (ಕೋತಂಬರಿ)

ಗಿಡ್ಡ ಗಿಡಕ ಗಿಣಿ ಮುಕರ‍್ಯಾವ (ಮೆಣಸಿನಕಾಯಿ)[೧೮]

ಹೀಗೆ ಒಗಟನ್ನು ಹಾಕಿದ ತಕ್ಷಣ ಉತ್ತರ ಥಟ್ಟನೆ ಹೊಳೆಯುತ್ತದೆ. ಕಾರಣ ಅವು ನಾವು ದಿನ ನಿತ್ಯ ಬಳಸುವ ಸಸ್ಯ ಸಂಪತ್ತುಗಳ ಉದಾಹರಣೆಗಳಾಗಿವೆ. ಇಂತಹ ಒಗಟುಗಳನ್ನು ಹಾಕಿ ಅವುಗಳನ್ನು ಅರ್ಥೈಸುವುದೆಂದರೆ ಜ್ಞಾನದ ವೇಗವನ್ನು ಎತ್ತಿ ತೋರಿಸಿದಂತಾಗುತ್ತದೆ. ಇಂತಹ ಸಸ್ಯ ಸಂಪತ್ತನ್ನು ಕುರಿತು ಸುಮಾರು ೧೧೫ ಒಗಟುಗಳು ಎರಡನೇ ಅಧ್ಯಾಯದಲ್ಲಿ ಕಂಡು ಬರುತ್ತವೆ.

ಮೂರನೇ ಅಧ್ಯಾಯದಲ್ಲಿ ದಿನನಿತ್ಯ ಬಳಸುವ ಸಲಕರಣೆಗಳನ್ನು ಕುರಿತು ಹೇಳುವ ಸುಮಾರು ೧೪೦ ಒಗಟುಗಳ ಸಂಗ್ರಹವಿದೆ. ಬಂಗಾರ ಗುಬ್ಬಿ ಬಾಲದಲ್ಲಿ ನೀರು ಕುಡಿಯುತ್ತದೆ ಎಂಬ ಒಗಟಿನಿಂದ ಪ್ರಾರಂಭಗೊಳ್ಳುತ್ತದೆ. ಇಲ್ಲಿ ಬಂಗಾರ ಗುಬ್ಬಿ ಎಂದರೆ ಚಿಮಣಿ. ಬಾಲದಲ್ಲಿ ನೀರು ಕುಡಿಯುವುದು ಎಂದರೆ ಬತ್ತಿ ಎಣ್ಣೆಯನ್ನು ಹೀರುವುದು. ಇದರರ್ಥ ಚಿಮಣಿ ದೀಪ.

ದೇಹದ ಅಂಗಾಂಗಳಾದ ಕಣ್ಣು, ಕಿವಿ, ಮೂಗು, ಬಾಯಿ, ತಲೆ, ಕೈ ಕಾಲು, ತುಟಿ, ಹಣೆ, ತಲೆ, ಬೈತಲೆ, ಕೂದಲು, ಶವಸಂಸ್ಕಾರ, ಸ್ತನಗಳು, ಹಚ್ಚೆ, ಪ್ರಸವವೇದನೆ, ಮುಂತಾದ ವಿಷಯಗಳನ್ನು ಕುರಿತು ಇರುವ ಸುಮಾರು ೫೬ ಒಗಟುಗಳ ಸಂಗ್ರಹವನ್ನು ಕಾಣುತ್ತೇವೆ. ಇವು 'ದೇಹಾಂಗಗಳು' ಎಂಬ ಶಿರ್ಷಿಕೆಯಡಿಯಲ್ಲಿ ಕಂಡು ಬರುತ್ತವೆ.

---

೧೮. ಜಾನಪದ ಒಗಟುಗಳು: ಸಂಪಾದಕರು ಡಾ. ಎಂ.ಎಸ್.ವಾಲಿ ಪುಟ ೩೨೫, ತೃತೀಯ ಮುದ್ರಣ ೨೦೦೩

ಈಟ ಗುಡಿ, ಗುಡಿ ತುಂಬಾ ಥಡಿ     (ನಾಲಿಗೆ)[೧೯]

ಉಟೋಪಚಾರ ವಸ್ತುಗಳನ್ನು ಆಧಾರವಾಗಿಟ್ಟುಕೊಂಡು ಹೇಳುವ ಕೆಲವೊಂದು ಒಗಟುಗಳಿವೆ. ಯಾಲಕ್ಕಿ, ಜೇಣುತುಪ್ಪ, ಹಣ್ಣುಗಳು, ರೊಟ್ಟಿಪಲ್ಯಗಳು, ಕಡಬು, ದೋಸೆ, ಪುರಿ, ಬೆಣ್ಣೆ, ಈರುಳ್ಳಿ, ಬೆಳ್ಳುಳ್ಳಿ, ಕಾಳುಗಳು, ಮೊಸರು, ತುಪ್ಪ, ಮೊಟ್ಟೆ, ಉಪ್ಪು, ಖಾರ ಇತ್ಯಾದಿ ಆಹಾರದ ಪದಾರ್ಥಗಳನ್ನು ಆಧರಿಸಿದ ಒಗಟುಗಳು ಕಂಡು ಬಂದಿವೆ.

ಥಳಿಸಲಾರದ ಅಕ್ಕಿ

ಕಾಸಲಾರದ ತುಪ್ಪ

ಹಳಸಲಾರದ ಹಣ್ಣು [೨೦]

(ಯಾಲಕ್ಕಿ, ಜೇನುತುಪ್ಪ, ಹುಣಸಿಹಣ್ಣು)

ಇಂತಹ ಸುಮಾರು ೫೬ ಒಗಟುಗಳ ಸಂಗ್ರಹಣೆಯನ್ನು ಈ ಗ್ರಂಥದಲ್ಲಿ ಕಾಣುತ್ತೇವೆ.

ಪರಿಸರದಲ್ಲಿಯ ಜೀವಿಗಳನ್ನು ಕುರಿತು 'ಜೀವ ಜಗತ್ತು' ಎಂಬ ಅಧ್ಯಾಯದಲ್ಲಿ ಹೇಳಿದ್ದಾರೆ. ಸುಮಾರು ೬೫ ಒಗಟುಗಳು ಸುತ್ತಮುತ್ತಲಿನ ಜೀವಿಗಳನ್ನು ಕುರಿತವುಗಳಾಗಿವೆ. ಉದಾ: ಜೇನು ಹುಳುಗಳು, ಹಾವುಗಳು, ನವಿಲುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯ ಮುಂತಾದವುಗಳನ್ನು ಕುರಿತವುಗಳಾಗಿವೆ.

ಒಗಟುಗಳಲ್ಲಿ ಹಾಸ್ಯ, ವಿನೋದವನ್ನು ಕಾಣುತ್ತೇವೆ. ವಿನೋದದ ಪ್ರಥಮ ರೂಪವೇ ಒಗಟಾಗಿದೆ. ಹಾಸ್ಯ, ವಿನೋದ ಮನುಷ್ಯನ ಸಹಜ ಪ್ರವೃತ್ತಿಯಾಗಿದೆ. ಹಾಸ್ಯದ ಮೂಲಕ ಮನರಂಜನೆ ನೀಡುವ ಬಲವಾದ ಸಾಧನಗಳಾಗಿಯೂ ಒಗಟುಗಳು ಇರುವುದುಂಟು. ಸಿಂಬಳ, ಕುರಿಪಿಕ್ಕೆ, ಹೂಸು, ಮಲಮೂತ್ರ, ಕೋಳಿಕಸ, ಒನಕೆ, ಆಗಸ, ಇಂತಹ ಹಲವಾರು ವಿಷಯಕ್ಕೆ ಸಂಬಂಧಿಸಿದಂತೆ ರಚಿತಗೊಂಡ ಒಗಟುಗಳು ಇಲ್ಲಿ ಕಂಡು ಬಂದಿವು. ಹಾಸ್ಯ ರಸವನ್ನು ಉಕ್ಕಿ ಹರಿಸುತ್ತವೆ.

ಬೆಳ್ಳಿ ಥಡಿ ನೆಲಕ್ಕ ಬಡಿ (ಸಿಂಬಳ)

ಭಟ್ಟರ ಕುಮರಿ ಬಿಟ್ಟರೆ ಸಿಗುವುದಿಲ್ಲ (ಹೂಸು)[೨೧] ಇಂತಹ ಒಗಟುಗಳನ್ನು ಕೇಳಲು ಮುಜುಗರವೆನಿಸಿದರೂ ಆ ಕ್ಷಣಕ್ಕೆ ನಗೆಗಡಲಲ್ಲಿ ಎಲ್ಲರನ್ನು ತೇಲಿಸಿ ಬಿಡುತ್ತವೆ. ಹೀಗೆ ಮನರಂಜನೆ ನೀಡುವ ಸುಮಾರು ೨೫ ಒಗಟುಗಳ ಅಪರೂಪದ ಸಂಗ್ರಹ ಇಲ್ಲಿದೆ.

---

೧೯ ಜಾನಪದ ಒಗಟುಗಳು: ಸಂಪಾದಕರು ಡಾ. ಎಂ.ಎಸ್.ವಾಲಿ ಪುಟ ೫೯ ಪ್ರ ತೃತೀಯ ಮುದ್ರಣ ೨೦೦೩

೨೦. ಜಾನಪದ ಒಗಟುಗಳು ಸಂಪಾದಕರು ಡಾ ॥ ಎಂ.ಎಸ್. ವಾಲಿ ಪು.ಸಂ. ೬೫ ತೃ.ಮು. ೨೦೦೩

೨೧. ಜಾನಪದ ಒಗಟುಗಳು ಸಂಪಾದಕರು ಡಾ ॥ ಎಂ.ಎಸ್. ವಾಲಿ ಪು.ಸಂ. ೭೯, ೮೦ ತೃ.ಮು. ೨೦೦೩

ಒಗಟುಗಳಲ್ಲಿ ಅಶ್ಲೀಲತೆಯು ಭಾವದಲ್ಲಿ ಕಂಡುಬರದೆ ಭಾಷೆಯಲ್ಲಿ ಮಾತ್ರ ಕಂಡು ಬರುವುದು. ಅಂತಹ ಭಾಷೆಯ ಮುಖಾಂತರ ಹುಟ್ಟಿಕೊಂಡ ಒಗಟುಗಳು 'ಅಶ್ಲೀಲ ಆವರಣ' ಎಂಬ ಅಧ್ಯಾಯದಲ್ಲಿ ಇವೆ.

ಆತಂಗ ಪತಂಗ ತಪೇಲ್ಯಾಗ ಹೇತಂಗ (ಸೀಕರಣಿ)[೨೨]

ಹಣ್ಣಾದ ಮಾವಿನ ಹಣ್ಣಿನ ಸೀಕರಣೆ ಮಾಡುವ ಉದಾಹರಣೆ ಬಳಸಲಾಗಿದೆ. ಸೀಕರಣೆ ಮಾಡಬೇಕಾದರೆ ಹಣ್ಣನ್ನು ಪಾತ್ರೆಯಲ್ಲಿ ಹಿಂಡಬೇಕಾಗುತ್ತದೆ. ಹಿಂಡಿದಾಗ ಅದು ಪತ ಪತನೆ ರಸವನ್ನು ಚೆಲ್ಲುತ್ತದೆ. ಅದನ್ನು ಇಲ್ಲಿ ಒಗಟಾಗಿ ಬಳಸಲಾಗಿದೆ. ಅಶ್ಲೀಲ ಭಾಷೆಯಿಂದ ಒಗಟುಗಳನ್ನು ಹೇಳಲು ಕೇಳಲು ತುಂಬಾ ಮುಜುಗರವೆನಿಸುತ್ತದೆ. ಆದರೂ ಇಂತಹ ಒಗಟುಗಳನ್ನು ಕೇಳಿದ ತಕ್ಷಣ ಹೊಟ್ಟೆ ಹಣ್ಣಾಗಿಸುವಷ್ಟು ನಗು ಉಕ್ಕಿ ಬರುವುದಂತು ನಿಜ. ಇಂತಹ ಒಗಟುಗಳನ್ನು ಸಂಗ್ರಹಿಸಿ ಬರೆಯಲು ಸ್ವಲ್ಪ ಹಿಂಜರಿಕೆಯುಂಟಾಗುತ್ತದೆ. ಕಾರಣ ಭಾಷೆ ಅಶ್ಲೀಲ ಆದರೆ ಹಾಸ್ಯ ಮನರಂಜನೆಗೋಸ್ಕರ ಅವುಗಳ ಅರಿವು ಅವಶ್ಯಕವೆನಿಸಿದೆ.

ಕೊನೆಯ ಸಂಗ್ರಹದಲ್ಲಿ ಗಣಿತ ಜಾಣ್ಮೆ ಹಾಗೂ ಪ್ರಶ್ನೋತ್ತರ ಒಗಟುಗಳ ಕುರಿತು ವಿಶ್ಲೇಷಿಸಿದ್ದಾರೆ. ಮನರಂಜನೆಯ ಜೊತೆ ಜೊತೆಗೆ ತಾರ್ಕಿಕ ಬುದ್ಧಿ, ಜಾಣ್ಮೆ ಪರೀಕ್ಷೆಯೇ ಇವುಗಳ ಉದ್ದೇಶವಾಗಿದೆ ವಾಕ್ ಸಂಪ್ರದಾಯದಲ್ಲಿ ಇಂತಹ ಸಂಖ್ಯಾತ್ಮಕ ಒಗಟುಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಇವು ಎಲ್ಲರ ತಲೆಗೂ ದಕ್ಕುವಂತಹುಗಳಲ್ಲ. ಇವು ಲೆಕ್ಕದ ಜಾಣ್ಮೆಯ ಒಗಟುಗಳಾಗಿವೆ.

**"ಶರಣಸ್ಮೃತಿ" :**

"ಶರಣಸ್ಮೃತಿ" ಡಾ. ಎಂ.ಎಸ್. ವಾಲಿಯವರ ಸಂಪಾದಿತ ಮತ್ತೊಂದು ಅಪರೂಪದ ಕೃತಿ ತಮ್ಮದೇ ಭುವನೇಶ್ವರಿ ಪ್ರಕಾಶನದ ಸಪ್ತಮ ಕೃತಿಯಾಗಿ ೧೯೮೮ ರಲ್ಲಿ ಪ್ರಕಟಗೊಂಡಿತು. ತಮ್ಮ ಚಿಕ್ಕಪ್ಪನಾದ ದಿ. ಶರಣಪ್ಪ ಕಲ್ಲಪ್ಪ ವಾಲಿಯವರು ಬರೆದು ಹಾಡಿದ ಹಾಡುಗಳ ಸಂಕಲನವೇ ಈ ಸಂಪಾದಿತ "ಶರಣಸ್ಮೃತಿ". ಶರಣ ಜೀವನವನ್ನು ಬಾಳಿ ಬದುಕಿ ತಕ್ಕಂತೆ ಅವರ ಹೆಸರೂ ಕೂಡ ಶರಣಪ್ಪ. ಆ ಹೆಸರಿಗೆ ಸಾರ್ಥಕ್ಯವನ್ನು ತಂದುಕೊಂಡವರು. ಅವರು ಇಂದು ನಮ್ಮ ಮಧ್ಯ ಇಲ್ಲವಾದರೂ ಅವರ ಸಾಹಿತ್ಯ ಅಮರವಾಗಿರುವುದಕ್ಕೆ ಡಾ. ವಾಲಿಯವರು ಕಾರಣೀಭೂತರಾಗಿದ್ದಾರೆ. ಅವರ ಸ್ಮೃತಿಯನ್ನು ಉಳಿಸಲು ಯತ್ನಿಸಿದ ಈ ಕೃತಿ ಅಂತೆಯೇ ಇದು "ಶರಣಸ್ಮೃತಿ".

೨೨. ಜಾನಪದ ಒಗಟುಗಳು ಸಂಪಾದಕರು ಡಾ॥ ಎಂ.ಎಸ್. ವಾಲಿ ಪು.ಸಂ. ೮೭ ತೃ.ಮು. ೨೦೦೬

ಈ ಗ್ರಂಥವನ್ನು ನಾಡಿನ ಹಿರಿಯ ಸಾಹಿತಿಗಳು ಜಾನಪದ ಉಳಿವಿಗಾಗಿ ಶ್ರಮವಹಿಸಿದ ಮಾನ್ಯ ಶ್ರೀ ಸಿಂಪಿ ಲಿಂಗಣ್ಣ ಚಡಚಣ ಅವರಿಗೆ ಸಮರ್ಪಿಸಿದ್ದಾರೆ. ಎಚ್. ಎಲ್. ನಾಗೇಗೌಡರು ಸೊಗಸಾದ ಮುನ್ನುಡಿಯನ್ನು ಬರೆದಿದ್ದಾರೆ. ದಿ. ಶರಣಪ್ಪನವರು ಬರೆದ ಹಾಡುಗಳನ್ನು ಆಯಾ ವಿಭಾಗಗಳಲ್ಲಿ ವಿಂಗಡಿಸಿ ಪ್ರಕಟಿಸಲಾಗಿದೆ. ಪ್ರಾರ್ಥನೆ-ಸ್ವಾಗತ, ನಾಡು-ನುಡಿ, ಸಾಹಿತಿ-ರಾಜಕಾರಣಿ, ವಿಭೂತಿ ಪುರುಷರು, ಕುಟುಂಬ ಯೋಜನೆ, ಸಂಕೀರ್ಣ ಹಾಡುಗಳು ಹೀಗೆ ವಿಭಾಗಗಳನ್ನು ಮಾಡಲಾಗಿದೆ.

ಜನಪದ ಸಾಹಿತ್ಯ ಪ್ರಕಾರ ಹುಟ್ಟಿದ್ದು, ಬೆಳೆದದ್ದು ಹಳ್ಳಿಗರ ಬಾಯಲ್ಲಿ. ಗ್ರಾಮೀಣ ಸೊಗಡಿನಲ್ಲಿ. ಇದುವರೆಗೂ ತನ್ನದೇಯಾದ ಜೀವಂತಿಕೆಯನ್ನು ಕಾಪಾಡಿಕೊಂಡು ಬಂದಿದೆ. ಇದು ಕನ್ನಡ ನಾಡಿನ ವೈಶಿಷ್ಟ್ಯವೂ ಆಗಿದೆ. ಕನ್ನಡ ನಾಡು ಹಳ್ಳಿಗಳಿಂದ ಕೂಡಿದ ಸಮೃದ್ಧ ಸುಂದರ ನಾಡು. ಈ ನಾಡಿನಲ್ಲಿ ಅನಕ್ಷರಸ್ಥರಿದ್ದರೂ ಚೆನ್ನಾಗಿ ಮಾತನಾಡುವ ಚತುರರೂ. ವಿವೇಕವುಳ್ಳವರೂ ಆಗಿದ್ದಾರೆಂಬುದನ್ನು ಪ್ರಾಚೀನ ಕಾಲದಿಂದಲೂ ಶಾಸನ. ಕಾವ್ಯಗಳಿಂದ ತಿಳಿದುಕೊಳ್ಳುತ್ತ ಬಂದಿದ್ದೇವೆ. ಸಾಹಿತ್ಯ ಯಾರೊಬ್ಬರ ಸ್ವತ್ತೂ ಅಲ್ಲ ಅದನ್ನು ಕೃಷಿ ಮಾಡಿ ಯಾರು ಬೇಕಾದರೂ ಬೆಳೆಸಿ ಬಳಸಿಕೊಳ್ಳಬಹುದು. ಪಂಡಿತರಂತೆ ಪಾಮರರೂ ಸಾಹಿತ್ಯ ನಿರ್ಮಾಣಕ್ಕೆ ಸಹಾಯಕರಾಗಿದ್ದಾರೆ ಎಂಬುದಕ್ಕೆ ಜನಪದ ಸಾಹಿತ್ಯವೇ ಸಾಕ್ಷಿಯಾಗಿದೆ. ಹಳ್ಳಿಯ ಜನರು ಕಾವ್ಯ ಶಕ್ತಿಯುಳ್ಳವರು ಹಾಡು ಕಟ್ಟಿ ಹಾಡಿ ಎಲೆಯ ಮರೆಯ ಕಾಯಿಯಂತೆ ಇದ್ದವರು. ಎಲೆಯ ಮರೆಯ ಹೂವಿನಂತೆ ಸುವಾಸನೆಯನ್ನು ಬೀರಿದವರು. ಅಂತಹವರ ಸಾಲಿಗೆ ಸೇರಿದ ದಿ. ಶರಣಪ್ಪ ವಾಲಿಯವರ ಕವಿತ್ವವನ್ನು ಅವರ ಕವನಗಳ ಸಂಗ್ರಹ ಮುಖಾಂತರ ಶರಣ ಸ್ಮೃತಿಯಲ್ಲಿ ನಿರೂಪಿಸಿದ್ದಾರೆ.

ಗೀಗೀ ಮತ್ತು ಲಾವಣಿಗಳು ಜನಪದದ ಬೇರೆ ಬೇರೆ ಪ್ರಕಾರದ ಸಾಹಿತ್ಯಕ್ಕಿಂತ ಭಿನ್ನವಾದವುಗಳು. ಅವುಗಳ ಛಂದಸ್ಸು ಬೇರೆ. ಸಾಮಾನ್ಯವಾಗಿ ದ್ವಿಪದಿ. ತ್ರಿಪದಿ. ಚೌಪದಿ ಹೀಗೆ ಸಾಗುತ್ತದೆ. ಛಂದಸ್ಸಿನ ಉಗಮದ ಬಗ್ಗೆ ಊಹಾ ಪೋಹಗಳು ನಿರ್ದಿಷ್ಟತೆಯಿಲ್ಲದಿರುವುದು. ನಿಖರ ಮಾಹಿತಿ ದೊರೆಯದಿರುವುದು ಕಂಡು ಬರುತ್ತದೆ. ಆದರೆ ಗೀ ಗೀ ಮತ್ತು ಲಾವಣಿಗಳ ವಿಷಯ ಹಾಗಲ್ಲ. ಅಲ್ಲಿ ರಚನಾಕಾರರ ಹೆಸರು ಮತ್ತು ಕಾಲವನ್ನು ಗುರುತಿಸಬಹುದು. "ಬಾಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಬಂದದ್ದೇ ಜನಪದ ಸಾಹಿತ್ಯ" ಎಂಬ ಸೂತ್ರಕ್ಕೆ ಹೊರತಾದವುಗಳು. ಈ ಗೀ ಗೀ ಮತ್ತು ಲಾವಣಿ ಸಾಹಿತ್ಯವನ್ನು ನಾವು ಜನಪದ ಸಾಹಿತ್ಯದಿಂದ ಹೊರತುಪಡಿಸಿದರೆ ಅಷ್ಟರಮಟ್ಟಿಗೆ ನಮ್ಮ ಸಾಹಿತ್ಯ ಬಡವಾಗುತ್ತದೆ. ಈ ಬೇರ್ಪಡಿಸುವಿಕೆ

ಅಷ್ಟೊಂದು ಸೂಕ್ತವಲ್ಲವೆನ್ನುವ ಎಚ್.ಎಲ್. ನಾಗೇಗೌಡರ ಅಭಿಪ್ರಾಯ ಈ ಸಂದರ್ಭದಲ್ಲಿ ನಿಜವೆನಿಸುತ್ತದೆ. ಏಕೆಂದರೆ ನಮ್ಮ ಸೂತ್ರವನ್ನು ಬದಲಾಯಿಸಿಕೊಳ್ಳಬೇಕೇ ಹೊರತು ಅವುಗಳನ್ನೇ ಹೊರದೂಡುವುದಲ್ಲ. ಗೀಗೀ ಮತ್ತು ಲಾವಣಿ ಛಂದಸ್ಸು ಯಾವ ವಿಷಯದ ಮೇಲಾದರೂ ಪದಗಳನ್ನು ರಚನೆ ಮಾಡಲು ಅವಕಾಶ ಒದಗಿಸಿಕೊಡುತ್ತದೆ. ವ್ಯಕ್ತಿಗಳನ್ನೋ ನಾಡು ನುಡಿಯನ್ನೋ, ಅಭಿಮಾನ ಸ್ಫೂರ್ತಿಯನ್ನೋ ಕುರಿತಾದ ಹಾಗೂ ಸರ್ಕಾರ, ಸರ್ಕಾರದ ಯೋಜನೆಗಳು ಹಾಗೂ ಅದರ ಪ್ರಯೋಜನ, ರಾಜಕಾರಣ, ಕೃಷಿ ವಿಷಯ ಹೀಗೆ ಹಲವಾರು ಸಂದರ್ಭ ಹಾಗೂ ಸನ್ನಿವೇಶವನ್ನು ಕುರಿತು ಹಾಡುಗಳನ್ನು ರಚಿಸಿ ಹಾಡಲಾಗುತ್ತದೆ. ಹೀಗೆ ಗೀಗೀ ಲಾವಣಿ ಛಂದಸ್ಸು ಸುಲಭವಾಗಿ ಯಾವುದೇ ವಿಷಯದ ಮೇಲೆ ರಚನೆಗೆ ಅನುಕೂಲವಾದ ಕಾರಣ ರಚಿಸಿದ ಎಷ್ಟೋ ಹಾಡುಗಳು ಬಹುಕಾಲ ನಿಲ್ಲುವುದಿಲ್ಲ. ಕೆಲವು ವಿಶೇಷ ಪದ್ಯಗಳು ನಿಲ್ಲುವಷ್ಟು ಸತ್ವ ಪಡೆಯುತ್ತವೆ. ಈ ಸರಣಿಯಲ್ಲಿ ಬಿ. ಶರಣಪ್ಪ ವಾಲಿಯವರು ಕೆಲವು ಹಾಡುಗಳ ಜೊತೆಗೆ ಸಾಲೋಟಗಿ ಶಿವಯೋಗಿಗಳ ಹಾಡು, ಜಗಜ್ಯೋತಿ ಬಸವೇಶ್ವರ, ಶಿವಶರಣ ನುಲಿಯ ಚಂದಯ್ಯ, ಕಿನ್ನರಿ ಬೊಮ್ಮಯ್ಯ ಮತ್ತು ಏಸುಕ್ರಿಸ್ತನ ಚರಿತ್ರೆ ಬರುತ್ತವೆ. ಇಲ್ಲಿ ವಸ್ತು, ವಿನ್ಯಾಸ, ಸಾಹಿತ್ಯ, ಸೊಬಗುಗಳವೆ. ಕಾರಣ ಬಹುಕಾಲ ಉಳಿಯುವ ಸಾಧ್ಯತೆ ಇವೆ.

ಕ್ರಿ.ಶ. ೧೯೧೪ರಲ್ಲಿ ಕಲ್ಲಪ್ಪ ವಾಲಿ ಮತ್ತು ಶರಣವ್ವ ವಾಲಿ ದಂಪತಿಗಳ ಪುತ್ರನಾಗಿ ಜನಿಸಿದ ಶರಣಜೀವಿ ಶರಣಪ್ಪನವರು ಕಾವ್ಯದ ಸೊಗಡಿರುವ ಪದ್ಯಗಳನ್ನು ಬರೆದು ಜನಪದ ಸಾಹಿತ್ಯಕ್ಕೆ ಕೊಡುಗೆಯಾಗಿ ಕೊಟ್ಟು ಉಪಕಾರ ಮಾಡಿದ್ದಾರೆ. ಆ ಪದ್ಯಗಳನ್ನು ಸಂಗ್ರಹಿಸಿ ಸಂಪಾದಿಸಿ ಮುದ್ರಿಸಿ ಉಪಕಾರವನ್ನು ಮತ್ತಷ್ಟು ಸ್ಮೃತಿಪಟಲದಲ್ಲಿ ಉಳಿಯುವಂತಹ ಕಾರ್ಯವನ್ನು ಡಾ. ಎಂ ಎನ್ ವಾಲಿಯವರು ಮಾಡಿದ್ದು ಸ್ತುತ್ಯಾರ್ಹವಾಗಿದೆ.

ಶರಣಪ್ಪನವರು ಹವ್ಯಾಸಿ ರಂಗಭೂಮಿಯಲ್ಲಿ ಸೇರಿ ಬಡತನಭೂತ, ಪಟ್ಟಾಭಿಷೇಕ, ಎಚ್ಚಮ್ಮನಾಯಕ, ರಕ್ತರಾತ್ರಿ ಮೊದಲಾದ ನಾಟಕಗಳಲ್ಲಿ ಅಭಿನಯಿಸಿ ಕಲಿಸುತ್ತ ಪ್ರದರ್ಶಿಸುವಲ್ಲಿ ಯಶಸ್ಸು ಪಡೆದರು. ಜೊತೆಗೆ ಪಿಟೀಲು, ಹಾರ್ಮೋನಿಯಂ, ತಬಲಾ ವಾದನವನ್ನು ಸ್ವಪ್ರಯತ್ನದಿಂದ ಕರಗತ ಮಾಡಿಕೊಂಡು ಹಾಡುಗಳನ್ನು ಬರೆದು ರಾಗ ಸಂಯೋಜಿಸಿ ಜೊತೆಗೆ ಭಜನೆ, ಬಯಲಾಟ, ನಾಟಕ, ಪಂತಿಹಾಡು, ಗೀಗೀಹಾಡು, ಲಾವಣಿಹಾಡು, ಪುರಾಣ ಕೀರ್ತನೆಗಳಿಗೆ ಪಿಟೀಲು ಕೃತಿಗೂಡಿಸಿ **ಪಿಟೀಲು ಶರಣಪ್ಪ** ಎಂದು ಪ್ರಸಿದ್ಧಿ ಪಡೆದಿದ್ದರು. ನೆರೆಹೊರೆಯ ಊರುಗಳಲ್ಲಿ ಖ್ಯಾತಿ ಪಡೆದಿದ್ದ ಶರಣಪ್ಪನವರು ಕ್ರಿ.ಶ. ೧೯೪೫ ರ ಹೊತ್ತಿಗೆ ಸ್ವಂತ ಗೀಗೀಮೇಳವನ್ನು ಕಟ್ಟಿಕೊಂಡು ತಾವೇ ಅದರ ನೇತೃತ್ವ ವಹಿಸಿ ಹಾಡು ರಚಿಸಿ ಹಾಡತೊಡಗಿದರು. ಈ ಹಾಡುಗಳ ಸಂಗ್ರಹವೇ ಈ ಶರಣ ಸ್ಮೃತಿ.

ಶರಣಸ್ಮೃತಿಯ ಪ್ರಾರಂಭದಲ್ಲಿ 'ಪ್ರಾರ್ಥನೆ- ಸ್ವಾಗತ' ಎಂಬ ವಿಭಾಗವಿದೆ. ಅದರಲ್ಲಿ ಆರು ಗೀತೆಗಳು ಕಂಡು ಬರುತ್ತವೆ. ಅವು ಪ್ರಾರ್ಥನಾ ಮತ್ತು ಸ್ವಾಗತ ಗೀತೆಗಳಾಗಿವೆ. ಈಶಸ್ತವನ. ಎಂಬ ಪ್ರಾರ್ಥನಾ ಗೀತೆ ತುಂಬ ಅರ್ಥಗರ್ಭಿತ ರಚನೆಯಾಗಿದೆ. ಸಾಲೋಟಗಿ ವಾಲಿ ಶರಣನಾದ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ಶಿವಕರುಣ ಸಂಪನ್ನನಾದ ನೀನು ನನಗೆ ಕವನ ರಚಿಸುವ ವರವನ್ನು, ಶಕ್ತಿಯನ್ನು, ಜ್ಞಾನವನ್ನು ಕೊಡು. ಹೊತ್ತು ಹೊತ್ತಿಗೆ ನಾನು ನಿನ್ನ ಚರಣಕ್ಕೆ ನಮಸ್ಕರಿಸುತ್ತೇನೆ. ದೇಶಭಕ್ತರನ್ನು ನೀನು ಹುಟ್ಟಿಸು, ರಾಷ್ಟ್ರದ್ರೋಹಿಗಳನ್ನು ನೀನು ಹರಣ ಮಾಡು. ಲಂಚಗುಳಿಗಳನ್ನು ವಂಚಿಸಿಬಿಡು. ಅಣ್ಣಾರಾಯ ಗುರುಗಳ ಸ್ಮರಿಸಿ ಕನ್ನಡ ಕವಿಯಾಗಿ ಚಂದದ ನುಡಿಯಿಂದ ಸೇವೆ ಮಾಡುತ್ತೇನೆ. ಮನ್ನಿಸಿ ವರನೀಡು ಎಂದು ಪ್ರಾರ್ಥಿಸುವ ಗೀತೆ ಇದಾಗಿದೆ. ಈ ಪ್ರಾರ್ಥನೆ ಇಂದಿನ ಪ್ರಸ್ತುತ ಕಾಲಕ್ಕೂ ಅನ್ವಯವಾಗುವಂತಹದುದಾಗಿದೆ. ಗೀಗೀ ಗಾಯನ ಸ್ಪರ್ಧೆ, ರಾಜ್ಯಮಟ್ಟದ ಗೀಗೀ ಸ್ಪರ್ಧೆ, ಟ್ರಸ್ಟಿನ ಉದ್ಘಾಟನೆ, ಪ್ರೈಸ್ಕೂಲ ಕಟ್ಟಡ ಅಡಿಗಲ್ಲು ಸಮಾರಂಭ ಮುಂತಾದ ಸಂದರ್ಭಗಳಲ್ಲಿ ರಚಿಸಿ ಹಾಡಿದ ಸ್ವಾಗತ ಗೀತೆಗಳು ಇಲ್ಲಿ ಸಂಗ್ರಹಗೊಂಡಿವೆ. ಅಂದಿನ ಸಭೆಗೆ ಆಗಮಿಸಿದ ಗಣ್ಯ ಮಾನ್ಯರ ಹೆಸರನ್ನು ಬಳಸಿಕೊಂಡು ರಚನೆ ಮಾಡಿದ ಗೀತೆಗಳಾಗಿವೆ. ಇದರಿಂದ ಆ ಸಭೆಗೆ, ಸಭೆಯಲ್ಲಿ ಭಾಗವಹಿಸಿದ ವ್ಯಕ್ತಿಗಳ ಘನತೆ, ಗೌರವ, ವ್ಯಕ್ತಿತ್ವ, ಅವರ ಸ್ಥಾನ ಮಾನಗಳು ಗೀತೆಯ ಮುಖಾಂತರ ಗೊತ್ತಾಗುತ್ತಿತ್ತು.

ಎಂ. ಎಂ. ಕಲಬುರ್ಗಿಯವರು ಒಂದು ಕಾರ್ಯಕ್ರಮಕ್ಕೆ ಬಂದಂತಹ ಸಂದರ್ಭದಲ್ಲಿ ಡಿ. ಶರಣಪ್ಪ ವಾಲಿಯವರು ಅವರ ಕುರಿತು ಸ್ವಾಗತ ಗೀತೆಯನ್ನು ರಚಿಸಿದ್ದಾರೆ.

ಸ್ವಾಗತ ಮಾಳ್ವೆವು ಆಗಮಿಸಿದ ಕಲಬುರ್ಗಿ ಮಲ್ಲಿನಾಥರಿಗೆ
ಡಾಕ್ಟರೇಟ ಪಥಪಿದರರಿಗೆ
ಓಂದಿನ ಕನ್ನಡ ಲೇಖಕ ಶಿಲಾಲಿಪಿ ಸಂಶೋಧಕ ತಜ್ಞರಿಗೆ
ಮೇಧಾವಿಯನಿಪ ಮಾನ್ಯರಿಗೆ [೨೩]

ಶರಣಸ್ಮೃತಿಯ ಎರಡನೆಯ ವಿಭಾಗದಲ್ಲಿ 'ನಾಡು-ನುಡಿ' ಕುರಿತು ರಚಿಸಿದ ಗೀತೆಗಳು ಕಂಡು ಬರುತ್ತವೆ. ನಾಡಿನ ಏಕೀಕರಣ, ಕನ್ನಡಾಂಬೆ, ಕರ್ನಾಟಕ ರಜತೋತ್ಸವ ಕೊಡುಗೆ, ಭಾರತೀಯರ ಕೀರ್ತಿ ಪತಾಕೆ, ಭಾರತ ಸ್ವಾತಂತ್ರ್ಯದ ಬೆಳ್ಳಿಹಬ್ಬ, ಇವುಗಳನ್ನು ಕುರಿತು ರಚನೆಗೊಂಡಿವೆ. ಕನ್ನಡ ನಾಡಿನ ಏಕೀಕರಣ ಸಂದರ್ಭ, ನಾಡನ್ನು ಕನ್ನಡ ಭಾಷೆಯನ್ನು ರಚಿಸುವ, ಕರ್ನಾಟಕದ ಪರಿಸರ, ಅರಣ್ಯ ಸಂಪತ್ತು, ಪ್ರಕೃತಿ ಸಂಪತ್ತು, ಪುಣ್ಯಪುರುಷರು, ಮಹಾಸ್ವಾದ್ವಿಗಳನ್ನು ಕೊಂಡಾಡುವ ಗೀತೆಗಳು ಇಲ್ಲಿ ಸಮಾವೇಶಗೊಂಡಿವೆ.

೨೩. ಶರಣಸ್ಮೃತಿ:ಸಂಪಾದಕರು ಡಾ. ಎಂ ಎನ್ ವಾಲಿ ಪುಟ ಸಂಖ್ಯೆ ೫ ಪ್ರ.ವರ್ಷ ೧೯೮೮

ಕನ್ನಡಕ್ಕಾಗಿ ಕೈಯೆತ್ತಿ ಕಲ್ಪತರು ಪಡಿ।
ಕನ್ನಡಕ್ಕಾಗಿ ಕೊರಳೆತ್ತಿ ಅಮೃತದ ಕುಡಿ।
ಕನ್ನಡಕ್ಕಾಗಿ ಕಿರಿಬೆರಳಾದರು ಎತ್ತಿ ಹಿಡಿ। ಕನ್ನಡಕೆ ।
ಕನ್ನಡಕೆ ತನು ಮನ ಸೇವೆ ಸಲ್ಲಿಸಿ ಸಾಧಿಸಿ ಏಕೀಕರಣ ।
ತಿಳಿಯುವುದೇ ಧರ್ಮ ಮಾನವನಾ
ಕನ್ನಡ ನಾಡಿಗೆ ಸಣ್ಣಾಗುವ ನಮ್ಮ ಗೀಗೀ ಮೇಳ ವಾಲಿ ಶರಣ ।
ಆತನ ಪದವ ಕೇಳ್ರಿ ಮುನ್ನಾ॥ [೨೪]

ಬುದ್ಧ ಬಸವ ಮಧ್ವಶಂಕರ ವಿದ್ಯಾರಣ್ಯರು।
ಮುದ್ದಣ್ಣ ಹರಿಹರ ರನ್ನ ಪೊನ್ನ ಪಂಪರು।
ರುದ್ರಮ್ಮ ಚೆನ್ನಮ್ಮ ಮಾದೇವಿಯರು। ನಿನ್ನಲ್ಲಿ
ನಿನ್ನಲ್ಲಿ ಜನಿಸಿ ಜಗದಲ್ಲಿ ಮೆರೆದ ಮಹಾಮಾನ್ಯರನ್ನು ಪಡೆದಾತೆ।
ಜಯ ಜಯ ಕರ್ನಾಟಕ ಮಾತೆ ॥ [೨೫]

ಕರ್ನಾಟಕ ರಜತೋತ್ಸವ ಕುರಿತು ರಚನೆಗೊಂಡ ಗೀತೆಯಲ್ಲಿ ಮಾಧುರ್ಯದ ಗೇಯತೆ ಕಂಡು ಬರುತ್ತದೆ. ಏರು ಇಳಿವಿನ ಧ್ವನಿ ರೂಪಗಳು ಇವೆ. ಸ್ವಾತಂತ್ರ್ಯ ದೊರೆತ ೨೫ ವರ್ಷ ಕಳೆದಿವೆ. ಅದರ ಸವಿ ನೆನಪಿಗಾಗಿ ಕನ್ನಡ ಸಾಹಿತ್ಯ ಸರ್ವತೋಮುಖವಾದ ಅಭಿವೃದ್ಧಿಯನ್ನು ಸಾಧಿಸಿ ಮೆರೆಯುತ್ತಿದೆ. ಸ್ವಾತಂತ್ರ್ಯಕ್ಕಿಂತ ಹಿಂದೆ ಮರೆಮಾಚಿದ ಸಾಹಿತ್ಯವನ್ನು ಬಯಲಿಗೆಳೆದು ತೋರಿಸಲು ಅಂದು ಕನ್ನಡಾಭಿಮಾನಿ ಜನ ಬಯಸಿದರು. ಸರ್ವರ ಮನೆಯಲ್ಲೂ ಸಾಹಿತ್ಯ ಭಂಡಾರ ಇರಬೇಕು ಎಂಬ ಮಾರ್ಮಿಕ ತತ್ವದ ಗೀತೆ ಇದಾಗಿದೆ. ಸಾರ್ವತ್ರಿಕ ಸರ್ವ ರೀತಿಯ ಬೆಳವಣಿಗೆಗೆ ಪೂರಕವಾಗಿ ಅಂದು ನಡೆದ ಯೋಜನೆ ಕಾರ್ಯಕ್ರಮಗಳನ್ನು ಕುರಿತು "ಕರ್ನಾಟಕ ರಜತೋತ್ಸವ" ಕವನ ಅರ್ಥಪೂರ್ಣವಾಗಿದೆ.

ಶರಣಸ್ಮೃತಿಯ ಮೂರನೇಯ ವಿಭಾಗ 'ಸಾಹಿತಿ ರಾಜಕಾರಣಿ' ಎಂಬುದಾಗಿದೆ. ಇಲ್ಲಿ ಅಗರಖೇಡದ ಅಣ್ಣಾ, ಶ್ರೀ ಸಿಂಪಿಲಿಂಗಣ್ಣ, ಶಾಸಕರಾದ ದಿ. ಸುರಪೂರ ಮಲ್ಲಪ್ಪಣ್ಣ, ರಾಜ್ಯ ಶಿಕ್ಷಣ ಸಚಿವ ಖರ್ಗೆಯವರು, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಜಿ ನಾರಾಯಣರು, ಸರದಾರ ಡಾ: ನಾಗುರರ ಆದರ್ಶ ಧರ್ಮಪತ್ನಿ ತಿ. ಸುಶಿಲಮ್ಮನವರು, ಶ್ರೀಮತಿ ಇಂಧಿರಾ ಗಾಂಧಿ ಎಂಬ ಶೀರ್ಷಿಕೆಯನ್ನೊಳಗೊಂಡ ಏಳು ಗೀತೆಗಳಿವೆ. ಇವು ಸಾಹಿತಿ ರಾಜಕಾರಣಗಳನ್ನು ಕುರಿತು ರಚನೆ ಗೊಂಡಿವೆ.

---

೨೪. ಶರಣಸ್ಮೃತಿ. ಸಂಪಾದಕರು ಡಾ. ಎಂ ಎಸ್ ವಾಲಿ ಪುಟ ಸಂಖ್ಯೆ ೯ ಪ್ರ. ವರ್ಷ ೧೯೮೮
೨೫. ಶರಣಸ್ಮೃತಿ .ಸಂಪಾದಕರು ಡಾ. ಎಂ ಎಸ್ ವಾಲಿ ಪುಟ ಸಂಖ್ಯೆ ೧೦ ಪ್ರ ವರ್ಷ ೧೯೮೮

'ಅಗರಖೇಡದ ಅಣ್ಣಾ' ಗೀತೆ ೨೦-೨-೧೯೬೯ರ 'ಸಂದರ್ಶನ' ವಾರ ಪತ್ರಿಕೆಯಲ್ಲಿ ಪ್ರಕಟವಾದ ಒಂದು ಗೀತೆಯಾಗಿದೆ. ಅಗರಖೇಡದ ಅಣ್ಣಾನವರನ್ನು ಕುರಿತು ವರ್ಣನೆ, ಅಂದ, ಚೆಂದ, ಅವರ ಹವ್ಯಾಸ, ಸಾಹಿತ್ಯ ವೃತ್ತಿ ಕುರಿತು ವರ್ಣನಾತ್ಮಕ ಶೈಲಿಯನ್ನು ಒಳಗೊಂಡಿದೆ. 'ಶ್ರೀ ಸಿಂಪಿ ಲಿಂಗಣ್ಣ' ಎಂಬ ಶೀರ್ಷಿಕೆಯ ಗೀತೆ ಸಿಂಪಿ ಲಿಂಗಣ್ಣನವರಿಗೆ ೭೭ ವರ್ಷ ತುಂಬಿದಂತಹ ಸಂದರ್ಭದಲ್ಲಿ ಶರಣಪ್ಪನವರು ಹಾಡಿ ಹೊಗಳಿದ್ದಾರೆ. ಸಿಂಪಿ ಲಿಂಗಣ್ಣನವರ ಸಮಗ್ರ ಜೀವನ, ವೃತ್ತಿ, ಸಾಹಿತ್ಯ ಕೃಷಿ ಕುರಿತು ಸುಂದರವಾಗಿ ರಚಿತಗೊಂಡಿದೆ. 'ಶಾಸಕರಾದ ದಿ: ಸೂರಪೂರ ಮಲ್ಲಪ್ಪಣ್ಣಾ' ಎಂಬ ಗೀತೆಯಲ್ಲಿ ಸರಳ ಶೈಲಿಯ ರಚನೆಯನ್ನು ಕಾಣುತ್ತೇವೆ. ಜೊತೆಗೆ ಏರು ಇಳುವಿನೊಂದಿಗೆ ಹಾಡುವ ಶೈಲಿಯನ್ನು ಹೊಂದಿದೆ. ಸುಮಾರು ಐದು ಪುಟಗಳಷ್ಟು ದೊಡ್ಡದಾದ ರಚನೆ. ದಿ. ಸೂರಪೂರ ಮಲ್ಲಪ್ಪಣ್ಣನವರ ಸಂಪೂರ್ಣ ಜೀವನ ಚರಿತ್ರೆಯನ್ನೂ, ಸವಿಸ್ತಾರ ಜೀವನ ಕ್ರಮದ ಮಾಹಿತಿಯನ್ನು ಒದಗಿಸುತ್ತದೆ. ಮಾನ್ಯ ಖರ್ಗೆಯವರು ಪ್ರಾಥಮಿಕ, ಮಾಧ್ಯಮಿಕ, ರಾಜ್ಯ ಶಿಕ್ಷಣ ಸಚಿವರಾಗಿದ್ದರು. ಅಂತಹ ಸಂದರ್ಭದಲ್ಲಿ ಅವರ ರಾಜಕೀಯ ಜೀವನ, ಸಾಮಾಜಿಕ ಕೊಡುಗೆ, ಸರಳ ಹೃದಯದ ಸದ್ಭಾವನೆ, ಇತ್ಯಾದಿ ಸಚಿವರು ಇನ್ನು ಉನ್ನತ ಸ್ಥಾನ ಮಾನಗಳನ್ನು ಪಡೆಯಲಿ ಎಂಬ ಹಾರೈಕೆಯನ್ನು ಶರಣಪ್ಪ ಮಾಲಿಯವರು 'ರಾಜ್ಯಶಿಕ್ಷಣ ಸಚಿವ ಖರ್ಗೆ' ಎಂಬ ಶಿರ್ಷಿಕೆಯ ಕವನದ ಮುಖಾಂತರ ಸಲ್ಲಿಸಿದ್ದಾರೆ. ಜೊತೆಗೆ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ 'ಶ್ರೀಮತಿ ಇಂಧಿರಾ ಗಾಂಧಿ (೧೯೭೫)' ಎಂಬ ಮತ್ತೊಂದು ಕವನ ರಚಿಸಿದರು.

ಕೆಲವೊಂದು ವಿಶೇಷತೆಗಳನ್ನು ಪಡೆದುಕೊಂಡು ವಿಶೇಷ ಎನ್ನುವಷ್ಟು ಮಹತ್ವದೊಂದಿಗೆ ಬಹಳಷ್ಟು ನಿಲ್ಲುವಷ್ಟು ಕೆಲವೊಂದು ಲಾವಣಿ ಮತ್ತು ಗೀಗೀ ಛಂದಸ್ಸು ಪಡೆದುಕೊಳ್ಳುತ್ತವೆ. ಅಂತಹ ರಚನೆಗಳೂ ಶರಣಪ್ಪ ಮಾಲಿಯವರಿಂದ ಆಗಿವೆ. 'ವಿಭೂತಿ ಪುರುಷರು' ಎಂಬ ಶೀರ್ಷಿಕೆಯಡಿಯಲ್ಲಿ ಕಂಡುಬರುತ್ತವೆ. 'ಸಾಲೋಟಗಿ ಶ್ರೀ ಶಿವಯೋಗಿಗಳ ಹಾಡು' ಎಂಬುದು ಹಿಂದೂ ಮುಸಲ್ಮಾನರ ಭಾವೈಕ್ಯತೆಯನ್ನು ಸಾರುವ ಅದ್ಭುತ ಕಲ್ಪನೆಯ ಐಕ್ಯತೆಯನ್ನು ಸೂಚಿಸುವ ಭವ್ಯ ರಚನೆಯಾಗಿದೆ.

ಹಿಂದೂ ಮುಸಲ್ಮಾನ ಒಂದು ಭಾವದ ಜಾತ್ರೆಯ ನೋಡೂನು ಬಾ।
ಸಾಲೋಟಗಿ ಕ್ಷೇತ್ರಕ್ಕೆ ಹೋಗುನು ಬಾ।
ಧೀನ ಹೊಡೆದು ಉಘೇ ಉಘೇ ಅನ್ನೋಣು ಬಾ। [೨೬]

---

೨೬. ಶರಣಶ್ರುತಿ:ಸಂಪಾದಕರು ಡಾ. ಎಂ ಎಸ್ ಮಾಲಿ. ಪುಟ ಸಂಖ್ಯೆ ೯೫ ಪ್ರ. ವರ್ಷ ೧೯೮೮

ಶಿವಯೋಗಿ ಗದ್ದುಗೆ ಕಟ್ಟಿ ಮಜಾರ। ಗುಡಿಯು ಕಟ್ಟಾರ ಮಹಲಿ ಆಕಾರ। ಗೋಳಗುಮ್ಮಟ ಇಟ್ಟಾರ ಶಿಖರ। ಮೊದಲ ಮುಸಲ್ಮಾನ ರಾಜರ ಆಸರ॥ ಹೀಗೆ ಎರಡು ಧರ್ಮದ ಜನರ ಪರಸ್ಪರ ಬಾಂಧವ್ಯದ ಸಂಕೇತವಾಗಿ ನಡೆಯುವ ಹಬ್ಬಗಳ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಿದೆ. ಇಂತಹ ಪದ್ಧತಿ ಇಂದಿಗೂ ಕೆಲವೊಂದು ಹಳ್ಳಿಗಳಲ್ಲಿ ಜರಗುತ್ತ ನಡೆದಿದೆ. ಜನರ ಅನ್ಯೋನ್ಯತೆಯ ಸಂಕೇತವಾಗಿ 'ಜಗಜ್ಯೋತಿ ಬಸವೇಶ್ವರ' ಎಂಬುದು ಬಸವಣ್ಣನ ಚರಿತ್ರೆಯನ್ನು ಸಾರುವ ರಚನೆಯಾಗಿದೆ. ಬಸವಣ್ಣನ ತತ್ವ ಸಿದ್ಧಾಂತಗಳನ್ನು ಸಾರುವ ಗೀತೆಯಾಗಿದೆ. ಹೀಗೆಯೆ ಶಿವಶರಣ ನುಲಿಯ ಚಂದಯ್ಯ, ಕನ್ನಡ ಬೊಮ್ಮಯ್ಯನ ಕುರಿತಾದ ಕವನಗಳು ಕಂಡು ಬರುತ್ತವೆ. ಹಾಗೆಯೇ ಯೇಸುಕ್ರಿಸ್ತನ ಜೀವನ, ಮತ್ತು ಬಾಲ್ಯ ಎಲ್ಲವನ್ನು ಅರ್ಥೈಸುವ ಏಸುಕ್ರಿಸ್ತನ ಚರಿತ್ರೆ ಎಂಬ ರಚನೆಯಲ್ಲಿ ಕಾಣುತ್ತೇವೆ. ಬಿಟ್ಟಾರೆ ಚರಿತ್ರೆ ಸಾರುವ ರಚನೆಗಳು ಇವು ಆಗಿವೆ. ಅಂತಹ ಹಾಡುಗಳನ್ನು ಕಟ್ಟಿ ಹಾಡುವುದು ಎಷ್ಟು ಕಠಿಣವೋ ಅಂತೆಯೇ ಅವುಗಳನ್ನು ಕೇಳುವುದೂ ಒಂದು ಮಹತ್ವತೆಯನ್ನು ಪಡೆದಿದೆ. ಏಕೆಂದರೆ ಓರ್ವ ಮಹಾನ್ ವ್ಯಕ್ತಿಯ ಸಮಗ್ರ ಪರಿಚಯ ಇಲ್ಲಿ ಕಂಡುಬರುತ್ತದೆ. ಕೇಳತು ಇಂತಹ ಪದ್ಯಗಳನ್ನು ಆಲಿಸುವುದರಿಂದ ಮನುಷ್ಯನ ಜ್ಞಾನ ಭಂಡಾರ, ಕಲ್ಪನಾ ಶಕ್ತಿ ಇನ್ನಷ್ಟು ಹೆಚ್ಚಾಗಿ, ಜೀವನ ಪಾವನವಾಗುತ್ತದೆ.

ಜನಸಂಖ್ಯಾ ನಿಯಂತ್ರಣದ ಸಲುವಾಗಿ ಸರ್ಕಾರ ಜಾರಿಗೆ ತಂದ ವಿಷಯದ ಕುರಿತು ರಚನೆಗೊಂಡ ಹಾಡು 'ಕುಟುಂಬ ಯೋಜನೆ' ಶರಣಸ್ಮೃತಿಯ ಐದನೆಯ ವಿಭಾಗದಲ್ಲಿ ಕಂಡು ಬರುತ್ತದೆ. **ಎರಡು ಹಡಿರಿ ಮುಂದ ತಡಿರಿ। ಮೀರಿ ಮೂರಾದರ ಬಿಡಿರಿ** ಎಂಬ ಅರ್ಥಪೂರ್ಣ ಪಲ್ಲವಿಯ ಮುಖಾಂತರ ಪದ್ಯವು ಸಾಗುತ್ತದೆ. ದೇಶದ ಜನಸಂಖ್ಯೆಯನ್ನು ನಿಯಂತ್ರಿಸುವ ಸಾಂದರ್ಭಿಕ ಸಂದೇಶವನ್ನು ಹೊತ್ತು ತಂದಿದೆ. ಹೀಗೆಯೇ ಸರ್ಕಾರದ ಅನೇಕ ಜನಪರ ಯೋಜನೆಗಳನ್ನು ಆಧಾರವಾಗಿಟ್ಟು ಕೊಂಡು ಶರಣಪ್ಪನವರು ಪದ್ಯಗಳನ್ನು ರಚಿಸಿದ್ದಾರೆ.

ಕೊನೆಯ ವಿಭಾಗದಲ್ಲಿ 'ಸಂಕೀರ್ಣ ಹಾಡುಗಳು' ಎಂಬ ಗುಚ್ಛ ಕಂಡುಬರುತ್ತದೆ. ವಿದ್ಯೆಯ ಮಹತ್ವ, ಭಾರತಾಂಬೆಯ ಸ್ತುತಿ, ಜನಪದರ ಕುರಿತಾದ ಹಾಡುಗಳು ಸಮಾವೇಶಗೊಂಡಿವೆ. ಜೊತೆಗೆ ಬ್ಯಾಂಕಿನ ಪ್ರಯೋಜನ, ಸರ್ಕಾರದ ಇಪ್ಪತ್ತು ಅಂಶಗಳ ಆರ್ಥಿಕ ಕಾರ್ಯಕ್ರಮಗಳ ಕುರಿತು ಪದ್ಯಗಳಿವೆ.

ಹೀಗೆ 'ಶರಣಸ್ಮೃತಿ' ಕೃತಿಯಲ್ಲಿ ಬರುವ ಹಾಡುಗಳು ತನ್ನದೇಯಾದ ಮಹತ್ವ ಗೇಯತೆಗಳನ್ನು ಹೊಂದಿವೆ. ಪ್ರತಿ ಪದ್ಯಗಳನ್ನು ಏರು ಇಳುವಿನೊಂದಿಗೆ ಹಾಡಬೇಕು. ವಾಲಿ

ಶರಣರು ಎಂಬ ಅಂಕಿತವನ್ನು ಪ್ರತಿಪದ್ಯದ ಕೊನೆಗೆ ಕಾಣುತ್ತೇವೆ. ಇದರಿಂದ ಹಾಡುಗಳೆಲ್ಲ ಶರಣಪ್ಪ ವಾಲಿಯವರಿಂದಲೇ ರಚಿತವಾದವುಗಳು ಎಂಬುದು ತಿಳಿದು ಬರುತ್ತದೆ. ಶರಣಪ್ಪನವರು ಬದುಕಿರುವಾಗಲೇ ಅವರ ಹಾಡುಗಳನ್ನು ಕೆಲವರು ಪಡೆದು ಕೊಂಡಿದ್ದರು. ಹಲವಾರು ಕಾರಣಗಳಿಂದ ಹಿಂದುರುಗಿಸಲಿಲ್ಲ. ಅವುಗಳನ್ನು ಹಿಂಪಡೆಯುವಲ್ಲಿ ಡಾ. ವಾಲಿಯುವರು ಸಾಕಷ್ಟು ಶ್ರಮಿಸಿದರೂ ಪ್ರಯೋಜನವಾಗಲಿಲ್ಲ. ಆದರೂ ಉಳಿದ ಕೆಲವು ಹಾಡುಗಳನ್ನಾದರೂ ಉಳಿಸುವ ಉದ್ದೇಶ ಈ "ಶರಣಸ್ಮೃತಿ" ಸಂಕಲನದ ಮುಖಾಂತರ ನೆರವೇರಿದೆ. ಶರಣಪ್ಪನವರಂತಹ ಅದೆಷ್ಟು ವ್ಯಕ್ತಿಗಳು ಎಲೆಯ ಮರೆಯ ಕಾಯಿಯಂತೆ ಬಾಳಿದ್ದಾರೆ. ಅಂತಹ ವ್ಯಕ್ತಿಗಳ ಅಧ್ಯಯನಕ್ಕೆ ಇದೊಂದು ಮಾದರಿಯಾಗಿದೆ. ಇಂತಹ ಒಂದು ಸಾರ್ಥಕ ಕಾರ್ಯವನ್ನು ಡಾ. ಎಂ ಎಸ್ ವಾಲಿಯವರು ಈ "ಶರಣಸ್ಮೃತಿ" ಕೃತಿಯ ಸಂಪಾದನೆಯ ಮೂಲಕ ಮಾಡಿ ತೋರಿಸಿದ್ದಾರೆ.

**"ಶಿವಶರಣ ಮೇದಾರ ಕೇತಯ್ಯ" :**

ಜಾನಪದದಲ್ಲಿ "ಶಿವಶರಣ ಮೇದಾರ ಕೇತಯ್ಯ" ಡಾ. ಎಂ ಎಸ್ ವಾಲಿಯವರ ಮತ್ತೊಂದು ಕೃತಿ. ಇದರಲ್ಲಿ ಮೇದಾರ ಕೇತಯ್ಯನ ಚರಿತ್ರೆ, ಕೋಲು ಪದ ಹಾಗೂ ವಚನ ಪದಗಳು ಕಂಡು ಬರುತ್ತವೆ. ಶಿವಶರಣರ ಭಾವ ಚಿತ್ರವುಳ್ಳ ಮುಖಪುಟ ಆಕರ್ಷಕವಾಗಿದೆ. ತಮ್ಮದೇ ಭುವನೇಶ್ವರಿ ಪ್ರಕಾಶನದಿಂದ ಶ್ರೀ ಲಕ್ಷ್ಮಣ ಸಜ್ಜನ ಅವರ ಆರ್ಥಿಕ ನೆರವಿನಿಂದ ೧೯೯೩ ರಲ್ಲಿ ಪ್ರಕಟಗೊಳಿಸಿದರು. ಇದುವರೆಗೆ ಎರಡು ಮುದ್ರಣಗಳನ್ನು ಕಂಡಿದೆ. ಸುಮಾರು ಸಾವಿರ ಪ್ರತಿಗಳು ಹೊರ ಬಂದಿವೆ. ಮಾಜಿ ಎಂ. ಎಲ್. ಸಿ. ಅದ ನಿವೃತ್ತ ಪ್ರಾಚಾರ್ಯರೂ ಆದ ಡಾ॥ ಎಚ್ ಟಿ ಸಾಸನೂರ ಅವರು ಸುಂದರವಾದ ಮುನ್ನುಡಿಯನ್ನು ಬರೆದಿದ್ದಾರೆ.

ಶರಣರ ಜೀವನ ಪಾವನಮಯವಾಗಿದೆ. ಅವರ ಆಚಾರ ವಿಚಾರಗಳು ಅಮೃತಧಾರೆಯಿದ್ದಂತೆ. ಶರಣರನ್ನು ಸ್ಮರಿಸುವುದರಿಂದ ನಮ್ಮ ಬಾಳಿಗೆ ಶಾಂತಿ ಸಮಾಧಾನಗಳು ದೊರೆಯುತ್ತವೆ. ಅವರ ಜೀವನ ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಜ್ಞಾನದ ಪರಿಧಿ ಸಾಕಷ್ಟು ಹೆಚ್ಚುತ್ತದೆ. ಇಂದಿನ ಮುಂದುವರೆದ ವೈಜ್ಞಾನಿಕ ಸಾಧನೆಯ ಹಿನ್ನಲೆಯಲ್ಲಿ ಶರಣರ ತತ್ವಾದರ್ಶಗಳನ್ನು ಪುನಃ ಪುನಃ ಮನನ ಮಾಡಿಕೊಳ್ಳಬೇಕಾಗುತ್ತದೆ. ಶಿವಶರಣರು ತಮ್ಮ ಜೀವನ ದುದ್ದಕ್ಕೂ ಸಕಲರಿಗೆ ಲೇಸನ್ನೇ ಬಯಸಿ ಚಿರಸ್ಮರಣೀಯರಾಗಿದ್ದಾರೆ. ಬಸವಾದಿ ಶರಣರ ಸಮಕಾಲೀನರಾಗಿ ಬಾಳಿ ಬೆಳಗಿದ ಅನೇಕ ವಚನಕಾರರು ಇನ್ನೂ ಅಜ್ಞಾತವಾಗಿಯೇ ಉಳಿದಿದ್ದಾರೆ. ಅವರ ಚರಿತ್ರೆ ಕಾಲ ಗರ್ಭದಲ್ಲಿ ಅಡಗಿಕೊಂಡಿರುವುದು ವಿಧಿವಿಲಾಸ. ಶಿವಶರಣರ ಚರಿತ್ರೆಯನ್ನು ತಿಳಿಯಲು ಅವರ ವಚನಗಳೆ ಇಂದು ನಮಗೆ ಮುಖ್ಯ ಆಧಾರಗಳಾಗಿವೆ. ಅವರ

ವಚನ ಮಾತ್ರ ದಿಂದ ಸಮಗ್ರ ಚರಿತ್ರೆ ತಿಳಿಯಲಾರದು. ಇಂತಹ ದುರ್ದರ ಪ್ರಸಂಗಗಳಲ್ಲಿ ನಮ್ಮ ಜನಪದರು ಶಿವಶರಣರ ಹಾಡುಗಳನ್ನು ರಚಿಸಿಯೋ ಕಥೆಗಳನ್ನು ಕಟ್ಟಿಯೋ ಅವರ ಚರಿತ್ರೆಯನ್ನು ಉಳಿಸಿರುವುದು ಶ್ಲಾಘನೀಯ. ಅಂತಹ ಶರಣ ಸಮೂಹದಲ್ಲಿ ಶಿವಶರಣ ಮೇದಾರ ಕೇತಯ್ಯನ ಚರಿತ್ರೆ ಅನುಪಮವಾದುದಾಗಿದೆ. ಈ ಚರಿತ್ರೆ ಕೋಲು ಪದದಲ್ಲಿ ಮೂಡಿ ಬಂದಿದೆ. ಇಂಥ ಶ್ರೇಷ್ಠ ಶಿವಶರಣರ ಬಗ್ಗೆ ಒಬ್ಬ ಅಜ್ಞಾತ ಹಳ್ಳಿಯ ಕವಿಯು ಸರಸ ತ್ರಿಪದಿಯಲ್ಲಿ ಹಾಡಿದುದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಜೊತೆಗೆ ಇದರಲ್ಲಿ ವಿವಿಧ ಮೂಲಗಳಿಂದ ಶಿವಶರಣ ಮೇದಾರ ಕೇತಯ್ಯನ ಚರಿತ್ರೆಯನ್ನು ಸಂಗ್ರಹಿಸಿ ಡಾ. ಎಂ ಎಸ್ ವಾಲಿಯವರು ಕಟ್ಟಿಕೊಟ್ಟಿದ್ದಾರೆ.ಡಾ. ಜಿ.ಎಸ್. ಗದ್ದಗಿಮಠ ಅವರ "ಕನ್ನಡ ಜಾನಪದ ಗೀತೆಗಳು" ಕೃತಿಯಲ್ಲಿ ಸಂಗ್ರಹಿಸಿದ ಮೇದಾರ ಕೇತಯ್ಯ ಶರಣರ ಹಾಡಿನಲ್ಲಿಯ ಕೆಲವು ತ್ರಿಪದಿಗಳನ್ನು ಬಳಸಿಕೊಂಡು ಆತನ ಊರು, ಕಾಲ, ದೇಶಗಳ ಬಗ್ಗೆ ಆತನ ಹೆಂಡತಿ, ವೃತ್ತಿಯ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ಕೇತಯ್ಯನ ಕಾಯಕ ನಿಷ್ಠೆಯನ್ನು ಸಾರುವ ಪದ್ಯಗಳು ಸೊಗಸಾಗಿವೆ. ಕೇತಯ್ಯನಿಗೆ ಶಿವ ಸೋತು ಶರಣಾದ ಬಗ್ಗೆ ಜನಪದ ಕವಿ ಹೇಳಿದ ಪದ್ಯಗಳು ಉಲ್ಲೇಖಗೊಂಡಿವೆ.

ಶಿವಶರಣ ಶಿವ ಕಾಯಕವ ಒರೆಗೆ ಹಚ್ಚುವರಾರು  
ಹರಸಹಿತ ಸೂತು ಬದುಕಿಸಿದ। ಮೇದಾರ  
ವರ ಕೇತ ನಿನಗೆ ಸರಿಯಾರು॥  
ಕೇತ ನಿನ ನೆನೆದಿರಕ ಯಾತಕದು ಈ ಜೀವ  
ಸೂತಕದ ಕೊಂಡ ಈ ಹುಳಗೊಂಡ। ನೋಡರಿತು  
ಚೇತನೆಯ ಹೊಂದು ನೆನೆನೆಸಿದು॥೨೭

'ಸತ್ಯಕ್ಕೆ ಸತ್ಯ: ನಿತ್ಯಕ್ಕೆ ನಿತ್ಯ' ಎಂಬ ವಾಣಿ ಜನಪದ ಕವಿಯ ಮಾರ್ಮಿಕತೆಗೆ ಔಚಿತ್ಯ ಪೂರ್ಣವಾಗಿದೆ.

ಕನ್ನಡ ಕಾವ್ಯ ಪುರಾಣಗಳಲ್ಲಿ ಕೇತಯ್ಯನ ಬಹುಮುಖ ವ್ಯಕ್ತಿತ್ವದ ಚಿತ್ರಣ ಯಾವ ರೀತಿಯಲ್ಲಿ ಮೂಡಿಬಂದಿದೆ ಎಂಬುದನ್ನು ಪುರಾಣ ಕಾವ್ಯಗಳ ಉದಾಹರಣೆಗಳನ್ನು ಬಳಸಿಕೊಂಡು ವಾಲಿಯವರು ಕೇತಯ್ಯನ ಬಗ್ಗೆ ಮಾಹಿತಿ ಒದಗಿಸಿದ್ದಾರೆ. ಭೀಮ ಕವಿಯ 'ಬಸವಪುರಾಣ.' ಉತ್ತರ ದೇಶದ ಬಸವಲಿಂಗ ವಿರಚಿತ 'ಬಸವೇಶ್ವರ ಪುರಾಣ'ದ ಕಥಾಸಾರ. ಷಡಕ್ಷರ ಕವಿಯ 'ಬಸವರಾಜ ವಿಜಯ' ಭೈರವೇಶ್ವರ ಕಾವ್ಯದ 'ಕಥಾಮಣಿಸೂತ್ರರತ್ನಾಕರ'ದ ಎರಡನೆಯ ಭಾಗ. 'ಶೂನ್ಯ ಸಂಪಾದನೆ' 'ಮೇದಾರ ಕೇತಯ್ಯ ಸಾಂಗತ್ಯ' ಹೀಗೆ ಹಲವಾರು

---

೨೭. ಜಾನಪದದಲ್ಲಿ ಶಿವಶರಣ ಮೇದಾರ ಕೇತಯ್ಯ:ಸಂಪಾದಕರು ಡಾ.ಎಂ ಎಸ್ ವಾಲಿ ಪು.ಸಂ೫೬-೫೭ ಮುದ್ರಣ ೨೦೦೦

ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಕೇತಯ್ಯನ ಕುರಿತಾದ ಮಾತು. ಪದ್ಯಗಳನ್ನು ಬಳಸಿಕೊಂಡು ಹೇಳಿದ್ದಾರೆ. ಜೊತೆಗೆ ಸಂಕ್ಷಿಪ್ತವಾಗಿ ಮೇದಾರ ಕೇತಯ್ಯನ ಜೀವನ ಚರಿತ್ರೆಯನ್ನು ವಿವರಿಸಿದ್ದಾರೆ.

ಇಲ್ಲಿ ಸಂಗ್ರಹಿಸಲಾದ ಹಾಡುಗಳು ಒಟ್ಟು ೨೭೯. ಅವು ದ್ವಿಪದಿಗಳಲ್ಲಿ ರಚಿತವಾಗಿವೆ. ಇವುಗಳನ್ನು ರಚಿಸಿದ ಕವಿ ಅನಾಮಧೇಯ. ಇವನ್ನು ಹಾಡಿದವರು ಅಥಣಿಯ ಶ್ರೀಮತಿ ದಾಕ್ಷಾಯಿಣಿ ತೋಟಿಸ್ವರ ಹರ್ತಿಯವರು. ಇದು ಒಂದು ಸುಂದರವಾದ ಕೋಲು ಪದವಾಗಿದೆ. ಶರಣ ಕೇತಯ್ಯನ ಸಮಗ್ರ ಜೀವನವನ್ನು ಈ ಹಾಡು ಒಳಗೊಂಡಿದೆ. ಹಾಡಿನ ಬಂಧ ಲಯಗಳಿಂದಾಗಿ ಹೃದಯ ಸ್ಪರ್ಶಿಯಾಗಿದೆ. ಶರಣರು ತಮ್ಮ ಚರಿತ್ರೆಯ ಅಂಶಗಳ ಕಡೆಗೆ ಗಮನ ಹರಿಸಲಿಲ್ಲ. ಹೀಗಾಗಿ ಅವರ ಚರಿತ್ರೆ ನಮಗೆ ಸರಿಯಾಗಿ ದೊರೆಯದಂತಾಗಿದೆ. ಇಂತಹ ಸಂದರ್ಭದಲ್ಲಿ ಜಾನಪದರು ಐತಿಹ್ಯಗಳ ಮೂಲಕ ಶರಣರ ಚರಿತ್ರೆಯ ಹಲವು ಅಂಶಗಳನ್ನು ಹಿಡಿದಿಟ್ಟಿದ್ದಾರೆ. ಉಪಕಾರ ಮಾಡಿದ್ದಾರೆ. ಇವನ್ನು ಶ್ರಮವಹಿಸಿ ಡಾ. ಎಂ ಎಸ್ ವಾಲಿಯವರು ಸಂಪಾದಿಸಿ ಅಭಿನಂದನಾರ್ಹರಾಗಿದ್ದಾರೆ.

ಕೋಲು ಕೋಲನ್ನ ರನ್ನದಕೋಲು ಕೋಲನ್ನ।

ಕೋಲನಾಡಿರಿ ಶಿವ ಸ್ಮರಿಸ ಬನ್ನಿರಿ॥ ೨೮

ಎಂಬ ಪಲ್ಲವಿಯೊಡನೆ ಹಾಡು ಪ್ರಾರಂಭವಾಗುತ್ತದೆ. ಗುರುವನ್ನು ಸ್ಮರಿಸಿ ಕವಿಯು ಶರಣ ಕೇತಯ್ಯನ ಕಥೆಗೆ ವರವನ್ನು ಬೇಡಿದ್ದಾನೆ. ಅನಂತರ ಶಂಭು. ಶಂಕರ. ಆದಿಶಕ್ತಿ. ಗಣಪತಿ.ಶಾರದಾಂಬೆ ಇವರನ್ನು ಸ್ತುತಿಸಿ ಕಥೆಯು ಸಾಗುತ್ತದೆ. ಕಲ್ಯಾಣ ಪಟ್ಟಣದ ವರ್ಣನೆ ಸ್ತುತ್ಯವಾಗಿದೆ.

ಶಿವಶರಣರ ನಾಮಾವಳಿಗಳು ಸಮುಚಿತವಾಗಿ ಈ ಕೋಲು ಪದಗಳಲ್ಲಿ ಹರಡಿಕೊಂಡಿರುವುದು ಜಾನಪದರ ಸಮಷ್ಟಿಪ್ರಜ್ಞೆ ಹಾಗೂ ಜಾಣ್ಮೆಗೆ ಸಾಕ್ಷಿಯಂತಿವೆ. ಈ ಶಿವಶರಣರ ಶ್ರೇಣಿಯಲ್ಲಿ ಶೋಭಿಸುವ ಮೇದಾರ ಕೇತಯ್ಯನನ್ನು ವರ್ಣಿಸುವ ಪದ್ಯಗಳು ತುಂಬಾ ಮನೋಹರವಾಗಿವೆ. ಪರಮ ಪವಿತ್ರವಾದ ಆತನ ಜೀವನದ ಪದರುಗಳನ್ನು ಹಂತ ಹಂತವಾಗಿ ಬಿಚ್ಚುತ್ತಾ ಸಾಗಿರುವುದು ಇಲ್ಲಿಯ ಒಂದು ವೈಶಿಷ್ಟ್ಯವಾಗಿದೆ. ಇದರಿಂದ ಕೇಳುಗರು. ಓದುಗರು ಆಸಕ್ತಿ ಹೆಚ್ಚಿಸಿಕೊಂಡು ಭಾವಪರವಶವಾಗುವರು. ಶರಣ. ಚರಿತ್ರೆ. ಶರಣ ಮಹಿಮೆ. ಹೇಳಿದರೆ

೨೮. "ಶಿವ ಶರಣ ಮೇದಾರ ಕೇತಯ್ಯ" ಸಂಪಾದಕರು ಡಾ. ಎಂ ಎಸ್ ವಾಲಿ ಪುಟ. ಸಂಖ್ಯೆ ೨೫ ಪ್ರ.ವರ್ಷ ೨೦೦೦

ತೀರದಂತಹುದು. ಆದರೂ ಶಿವನು ನುಡಿಸಿದಂತೆ ನುಡಿಯುವೆ. ಎಂದು ಕವಿಯು ತನ್ನಲ್ಲಿರುವ ವಿನಯವನ್ನು ಪ್ರಕಟಿಸಿದ್ದಾನೆ. ಕಥೆಗೆ ನಾನು ನಿಮಿತ್ತ ಮಾತ್ರ. ಇಲ್ಲಿ ಬಂದಿರುವುದೆಲ್ಲ ಶಿವನುಡಿ ಎಂಬುದು ಕವಿಯ ಹೇಳಿಕೆ.

ಶರಣ ಮಹಿಮೆಯ ಪೇಳೆ ತೀರದಂತದ್ದು।
ಹರನು ನುಡಿಸಿದ ತೆರದಿ ನಡಿಯ ಪೇಳುವೆ॥
ಹಿಡಿದು ಗುರುವಿನ ಆಜ್ಞೆ ಬಿಡದೆ ಕಾಯಕ
ನಡೆಸುತಿರ್ದನು ಗಣಕೆ ಜಿದಿರು ಚಿಬ್ಬಲಾ॥[29]

ಹೀಗೆ ಹಿತಮಿತವಾದ ಪ್ರಾಸಾದಿಕ ಶಬ್ದಗಳ ಬಳಕೆ ಕಥೆಯ ಮುನ್ನಡೆಗೆ ಸಾಧಕವಾಗಿದೆ. ಕ್ರಾತದೇವರು ಎಂಬ ಪದ ಪ್ರಯೋಗವು ಜಾನಪದರ ಭಕ್ತಿಗೆ, ಅವರ ಶ್ರದ್ಧೆಗೆ ನಿದರ್ಶನದಂತಿದೆ. ಕಾಯಕ ಯೋಗಿ ಮೇದಾರ ಕೇತಯ್ಯನ ದಿನಚರಿಯನ್ನು ಅವನು ಗಳಿಸಿದ್ದನ್ನು ಬಳಸುವ ರೀತಿಯನ್ನು ಕೋಲು ಪದಗಳಲ್ಲಿ ಕೊಂಡಾಡಲಾಗಿದೆ. ಇತರ ಪುರಾಣ ಕಾವ್ಯಗಳಿಗಿಂತಲೂ ಈ ಕೋಲು ಪದವು ಹೆಚ್ಚು ಪ್ರಭಾವವನ್ನು ಬೀರುತ್ತದೆ. ಜಾನಪದರ ಈ ಬುದ್ಧಿವಂತಿಕೆಯ ಸೃಷ್ಟಿಗೆ ನಾವು ತಲೆದೂಗಲೇಬೇಕು. ಶ್ರೀಕರಣ ಶುದ್ಧಿಯಿಂದ ಬಾಳಿದ ಅವನ ವಚನಗಳ ಸಂಖ್ಯೆ ಎಷ್ಟು ಎಂಬುದು ಗೊತ್ತಾಗಿಲ್ಲ. ಅವನು ಎಲ್ಲಿ ಲಿಂಗೈಕ್ಯನಾದನು? ಅವನ ತಂದೆ ತಾಯಿಗಳು ಯಾರು? ಅವನಿಗೆ ಮಕ್ಕಳಿದ್ದರೆ? ಎಂಬ ಮುಂತಾದ ವಿಷಯಗಳು ಇಂದಿನ ಸಂಶೋಧಕರಿಗೆ ಸವಾಲಾಗಿವೆ ಈ ದಿಸೆಯಲ್ಲಿ ವಾಲಿಯವರ ಈ ಕೃತಿ ಸಂಶೋಧಕರಿಗೆ ಪ್ರಥಮ ಮೆಟ್ಟಿಲಾಗಿ ಮಾರ್ಗದರ್ಶನವಾಗಬಹುದು. ಜೊತೆಗೆ ಇದರಲ್ಲಿ ಈತನ ಹದಿನಾಲ್ಕು ವಚನಗಳು ಇಲ್ಲಿ ಸಂಗ್ರಹಗೊಂಡಿವೆ. ಕೇತಯ್ಯನ ಬದುಕು ವಚನಗಳ ಕುರಿತು ಸಮಗ್ರ ಅಧ್ಯಯನವಾದರೆ ಇನ್ನಷ್ಟು ಸಂಗತಿಗಳು ಬೆಳಕಿಗೆ ಬರುವ ಸಾಧ್ಯತೆಗಳಿವೆ. ಈ ದಿಶೆಯಲ್ಲಿ ನಾವಿನ್ನು ಶ್ರಮಿಸಬೇಕಾಗಿದೆ. ಕೋಲುಪದದಲ್ಲಿ ಮತ್ತು ವಚನಗಳಲ್ಲಿ ಕೆಲವು ಹೊಸ ವಿಷಯಗಳು ಸಿಗುತ್ತಿರುವುದೇ ಅಧ್ಯಯನಕ್ಕೆ ಸ್ಫೂರ್ತಿಯಾಗುವುದು.

**"ದುಂಡಮಲ್ಲಿಗೆ ಹೂವ ಬುಟ್ಟಲಿ ಬಂದಾವ" :**

ಉತ್ತರ ಕರ್ನಾಟಕದ ಜನಪದರ ಗೀತೆಗಳ ಸಂಗ್ರಹವೇ ಈ "ದುಂಡಮಲ್ಲಿಗೆ ಹೂವ ಬುಟ್ಟಿಲಿ ಬಂದಾವ" ಎಂಬ ಸಂಪಾದನಾ ಕೃತಿ. ಇದನ್ನು ಎಚ್. ಎಲ್. ನಾಗೇಗೌಡರು ಐ.ಎ.ಎಸ್. ಅಧಿಕಾರಿಯಾಗಿ ಕಾರ್ಯನಿರ್ವಹಿಸುವಂತಹ ಸಂದರ್ಭದಲ್ಲಿ ಸಂಗ್ರಹಿಸಿದ ಮತ್ತು

---

೨೯. "ಶಿವ ಶರಣ ಮೇದಾರ ಕೇತಯ್ಯ" ಸಂಪಾದಕರು ಡಾ. ಎಂ ಎಸ್ ವಾಲಿ ಪುಟ. ಸಂಖ್ಯೆ ೨೬ ೨೫ ಪ್ರವರ್ಷ೨೦೦೦

ಕರ್ನಾಟಕ ಜನಪದ ಪರಿಷತ್ತಿನ ಅಧ್ಯಕ್ಷರಾದಂತಹ ಸಂದರ್ಭದಲ್ಲಿ ಡಾ. ಎಂ. ಎಸ್. ವಾಲಿಯವರು ಸಂಪಾದಿಸಿದರು. ಸಂಪಾದನಾ ಸಹಾಯಕರಾಗಿ ಶ್ರೀಮತಿ ಸರ್ವ ಮಂಗಳ ಮತ್ತು ಶ್ರೀಮತಿ ಅನ್ನಪೂರ್ಣ ಅವರು ಕಾರ್ಯನಿರ್ವಹಿಸಿದರು. ೧೯೯೫ ರಲ್ಲಿ ಈ ಕೃತಿ ಪ್ರಥಮ ಮುದ್ರಣ ಕಂಡಿತು.

ಈ ಕೃತಿಯಲ್ಲಿ ಸಂಪಾದನೆಗೊಂಡ ಹಾಡುಗಳು "ಕರ್ನಾಟಕ ಜಾನಪದ ಪರಿಷತ್"ನ ಧ್ವನಿ ಮುದ್ರಿತ ಕ್ಯಾಸೆಟ್ಟುಗಳ ಆಧಾರದಿಂದ ಬರೆದು ಕೊಂಡು ಪ್ರಕಟಣೆಗೆ ಅಣಿಗೊಳಿಸಿದವುಗಳಾಗಿವೆ. ಇಲ್ಲಿ ಬಳಸಿದ ಒಟ್ಟು ಕ್ಯಾಸೆಟ್ಟುಗಳ ಸಂಖ್ಯೆ ೧೩ ಹಾಗೂ ಇಲ್ಲಿ ಒಟ್ಟು ಸಂಗ್ರಹಿಸಿದ ಹಾಡುಗಳ ಸಂಖ್ಯೆ ೧೫೯ ಈ ಹಾಡುಗಳನ್ನು ೧೯ ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ವಿಂಗಡನೆಯನ್ನು ಅಯಾ ರಾಗ. ಧಾಟಿ. ಗೇಯತೆ. ವಿಷಯಗಳಿಗನುಗುಣವಾಗಿ ಮಾಡಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಸ್ಥೂಲವಾದ ವಿಂಗಡನೆಯನ್ನು ಮಾಡಲಾಗಿದೆ.

ಇಲ್ಲಿಯ ಹಾಡುಗಳಲ್ಲಿ ಜೋಗುಳ ಹಾಡು, ಬೀಗರ ಹಾಡು. ಬೀಸುವ-ಕುಟ್ಟುವ ಹಾಡು, ಪ್ರೇಮ ಗೀತೆಗಳು, ಭಕ್ತಿಗೀತೆಗಳು, ಸೋಬಾನ ಹಾಡುಗಳು.ಸಂವಾದ ಗೀತೆಗಳು, ಹಂತಿಯ ಹಾಡುಗಳು. ಹಬ್ಬದ ಹಾಡುಗಳು. ಕೋಲು ಪದಗಳು. ಭಜನಾ ಹಾಡುಗಳು. ಅನುಭಾವ ಪದಗಳು. ಕಥನ ಗೀತೆಗಳು. ಚೌಡಿಕೆ ಹಾಡುಗಳು. ಗೀಗೀ ಹಾಡುಗಳು. ರಿವಾಯತ ಹಾಡುಗಳು. ಮೈಲಾರಲಿಂಗನ ಹಾಡುಗಳು. ವೀರಭದ್ರದೇವರ ಒಡಪು- ಹಾಡುಗಳು. ಸಂಕೀರ್ಣ ಹಾಡುಗಳು ಸಮಾವೇಶಗೊಂಡಿವೆ. ಮಾನವನ ಆಶೆ ಆಕಾಂಕ್ಷೆ. ಭಕ್ತಿ-ಭಾವ. ಸಿಹಿ-ಕಹಿ ಅನುಭವಗಳು ಈ ಹಾಡುಗಳಲ್ಲಿ ಅಭಿವ್ಯಕ್ತವಾಗಿವೆ. ಕೆಲವು ಒಬ್ಬರೇ ಹಾಡುವ ಹಾಡುಗಳಾದರೆ. ಮತ್ತೆ ಕೆಲವು ಹಿಮ್ಮೇಳ ಮುಮ್ಮೇಳವಾಗಿ ಹಾಡಲು ಯೋಗ್ಯವಾಗಿವೆ. ಹಾಡುಗಳನ್ನು ಆಲಿಸಿದ ತಕ್ಷಣ ಆ ಹಾಡಿನ ಆಶಯ ಸ್ಪಷ್ಟವಾಗುತ್ತದೆ. ಡಾ. ಎಂ. ಎಸ್. ವಾಲಿಯವರು ಪ್ರತಿ ಹಾಡನ್ನು. ಹಾಡಿದವರ ಹೆಸರನ್ನು ಉಲ್ಲೇಖಿಸಿ ವಿಭಾಗಾನುಸಾರ ಸುಂದರವಾಗಿ ಸಂಪಾದಿಸಿದ್ದಾರೆ.

ಮೊದಲ ವಿಭಾಗದಲ್ಲಿ 'ಜೋಗುಳ ಪದಗಳು' ಕಂಡು ಬರುತ್ತವೆ. ಶ್ರೀ ಗುರುಕರುಣೋದಿ' ಜೋ ಜೋ ಎನ್ನು. ಬಂಗಾರ ತೊಟ್ಟಿಲ ಎಂಬ ಶಿರ್ಷಿಕೆಯಲ್ಲಿ ರಚನೆಗೊಂಡಿದೆ. ಕ್ರಮವಾಗಿ ಶ್ರೀ ರಾಚಪ್ಪ ಬಳಬಟ್ಟಿ ಸಾಕಿನ ಬಳಬಟ್ಟಿ. ತಾಲೂಕು ಮುದ್ದೇಬಿಹಾಳ. ಶ್ರೀಮತಿ ಶಂಕರಮ್ಮ ಯಮನಪ್ಪ ಮೂಕಿಹಾಳ. ಭೀಮವ್ವ ಬಸಪ್ಪ ಮೂಕಿಹಾಳ. ಶ್ರೀಮತಿ ಚಂದ್ರಭಾಗಮ್ಮ ವರದಪ್ಪನವರ ಮೂಕಿಹಾಳ ಹಾಡಿದ್ದಾರೆ. ಮಳೆಯನ್ನು ಬೇಡಿಕೊಳ್ಳುವ 'ಶ್ರೀ ಗುರುಕರುಣದಿ' ಪದ ನಾಲ್ಕು ಸಾಲುಗಳುಳ್ಳ ಪದ್ಯವಾಗಿದೆ. ಹುಟ್ಟು ಮೋಕ್ಷದ ಅರಿವನ್ನುಂಟು ಮಾಡುತ್ತದೆ. ಹರಿಗೆಯಾದ

ಹನ್ನೊಂದು ದಿನಗಳಾದ ಮೇಲೆ ತೊಟ್ಟಿಲು ಶಾಸ್ತ್ರ ನಡೆಯುತ್ತದೆ. ಅಂತಹ ಸಂದರ್ಭದಲ್ಲಿ ಹಾಡುವ ಪದಗಳು ಈ ಜೋಗಳ ಪದಗಳಾಗಿವೆ. ಮಗ, ಬಾಣಂತಿಯ ವರ್ಣನೆ ಇಲ್ಲಿ ಕಂಡು ಬರುತ್ತದೆ. ತೊಟ್ಟಿಲು ಮಾಡಿಸುವದು, ಅದನ್ನು ಸಿಂಗರಿಸುವದು ಗ್ರಾಮೀಣ ಜನತೆಯ ಕಲೆ. ಚಂದ ಚಿತ್ರದ ತೊಟ್ಟಿಲು, ಅದರ ಮೇಲೆ ಕಟ್ಟಿದ ಗಿಳಿಗಳು, ನಾಲ್ಕು ಕಡೆ ಕೊಂಚಿಗೆ ಹಾಕುವುದು ಇತ್ಯಾದಿ. ಇವುಗಳೆಲ್ಲವು ಶುಭದ ಸಂಕೇತಗಳಾಗಿವೆ. ಮಗುವನ್ನು ತೊಟ್ಟಿಲಿಗೆ ಹಾಕುವಾಗ ಎಲ್ಲ ಜನರನ್ನು ಕರೆಯುತ್ತಾರೆ. ಅವರು ಕೂಡ ಮಗುವಿಗೆ ಬಾಗಿಣ, ಮುಯ್ಯಿ ತರುತ್ತಾರೆ. ಸೋದರತ್ತೆ ಹೆಸರನ್ನು ಇಡುತ್ತಾರೆ.

ಸೋದರತ್ತೆ ನಿನ್ನ ಗುದ್ದೆನು ಬಾರ ।
ಮೃದುವಾದ ವಚನದ ವದನವ ತೋರ ।
ಮುದದಿಂದ ಹೆಸರಿಟ್ಟು ವದನವ ತೋರ ।
ನಿನು ದೇವರ ಬೇಡರಿದಿರು ನಂದನ್ನು ಬಳಿವಾರ ಜೋ ಜೋ ॥ [೩೦]

ಹೀಗೆ ಹೆಸರಿಡುವ ಸಂದರ್ಭದಲ್ಲಿ ವರ್ಣನಾತ್ಮಕವಾಗಿ ಹಾಡುವ ಹಾಡುಗಳು ಈ ಜೋಗುಳ ಪದಗಳಾಗಿವೆ. ಮುಂದೆ ಹಾಡುವವರು ಹಾಡನ್ನು ಹಾಡಿದರೆ ಹಿಮ್ಮೇಳದವರು ಜೋ ಜೋ ಎಂದು ರಾಗ ಬದ್ಧವಾಗಿ ಹೇಳುವರು.

ಎರಡನೇ ಭಾಗದಲ್ಲಿ ಮದುವೆಯ ಕಾಲಕ್ಕೆ ಹಾಡುವ ಬೀಗರ ಹಾಡುಗಳು ಕಂಡು ಬರುತ್ತವೆ. ಕರಿಬಂದಿನ ಜಗುತಿ ಹಾಸು, ಬೀಗರ ಅವಹೇಳನ, ಮಗಳ ಮದುವೆಮಾಡಿ ಮತ್ತೊಂದು ಕಳಕೊಂಡೆ, ಬಂದಿರಿ ನನ್ನ ಬೀಗರೆ, ಬೀಗರ ಚಲುವಿಕೆ ಬಾಳ ಹೇಳತಿರಿ ಎಂಬ ೫ ಹಾಡುಗಳಿವೆ. ಶ್ರೀಮತಿ ಶಂಕರಮ್ಮ ಮೂಕಿಹಾಳ, ಭೀಮವ್ವ ಬಸಪ್ಪ ಮೂಕಿಹಾಳ, ಚಂದ್ರಭಾಗಮ್ಮ ವರದಪ್ಪನವರ ಶ್ರೀ ವೀರಭದ್ರಪ್ಪ, ಶೀಲವಂತ, ಶ್ರೀಮತಿ ನೀಲಲಿಂಗಪ್ಪ, ಮುರಿಗೆಪ್ಪ, ಶ್ರೀಮತಿ ಯಮನವ್ವ ಹನಮಂತ ಗೊಟಗುಣಕಿ ಅವರು ಹಾಡಿದ ಹಾಡುಗಳಾಗಿವೆ.

ಬೀಸುವ-ಕುಟ್ಟುವ ಹಾಡುಗಳು ಒಟ್ಟು ೧೬ ಕಂಡುಬರುತ್ತವೆ. ಅರಗಿನ ಭಾಂಡ್ಯಾಗ, ಬೇಲಿಮ್ಯಾಲಿನ ಹೂವ, ಅಣ್ಣ ಇರುವುದು ದೇವದುರ್ಗ, ದೂರಕ್ಕ ದೂರಿರಲೀ, ರಸಬಾಳಿ ಒಯ್ಯಾರ, ಗಂಜಿ ರುಂಬಾಲ, ಏಳುತ ನೆನೆದೇವ, ಏಳೂತ ನಿಮ್ಮ ಧ್ಯಾನ , ಹಟ್ಟಿಯ ಮಂಗಮ್ಮ, ಭಾಗ್ಯವ ಕೊಡುದೇವ, ನೀರನೀರಂತಿರಿ, ಸುಕ್ಕವ್ವಕ್ಕಸುವ್ವನಾರಿ, ಕರಿ ಬಂದ ಕರಿ ಬಂದಭಾಗ್ಯವ ಕೊಡುದೇವ . ನೀರನೀರಂತಿರಿ ಸುಕ್ಕವ್ವಕ್ಕಸುವ್ವನಾರಿ, ಕರಿಬಂದ ಕರಿಬಂದಾರ ಚಂದರಾಮ ನೀ ಚೆಲುವ, ಕಿರಿ ಮಗಳು ನಾನಮ್ಮ . ಸೊಲ್ಲಾಪೂರ ಎಂಬ ಹಾಡುಗಳಿವೆ. ಈ ಹಾಡುಗಳನ್ನು

೩೦- ಮಂಡುಮಲ್ಲಿಗೆ ಹೂವ ಬುಟ್ಟಿಲಿ ಬಂದಾವ: ಸಂಪಾದಕರು ಡಾ. ಎಂ ಎಸ್ ಪಾಟೀಲ ಪು. ಸಂಖ್ಯೆ ೭ ಪ.ಪದ್ಯಸಂಖ್ಯೆ

ಶಂಕರಮ್ಮ, ಭೀಮವ್ವ, ನಿಜಲಿಂಗವ್ವ,ಯಮನವ್ವ, ವೀರಮ್ಮ., ನೀಲಮ್ಮ, ಮಧುರಾಬಾಯಿ ಶರ್ಮಾ. ವೀರಭದ್ರಪ್ಪಾ ಶೀಲವಂತ ಹಾಡಿದ್ದಾರೆ. ಬೀಸುವಾಗ ಬೀಸುವ ನಾದವೇ ಇದಕ್ಕೆ ವಾದ್ಯವಾಗಿದೆ. ಕಾಳನ್ನು ಒಡೆದು ಹಿಟ್ಟಾಗಿಸುವ ಆ ಶಬ್ದದ ನಾದಕ್ಕೆ ಹಾಡು ತಾನಾಗಿಯೇ ಹೊಂದಿಕೊಳ್ಳುತ್ತದೆ. ಒಮ್ಮೆ ಕಾಳಿನ ಮುಕ್ಕನ್ನು ಕಲ್ಲಿನಲ್ಲಿ ಹಾಕಿ ಅದು ಗುಡು ಗುಡುವಾಗಿಸುವ ಶಬ್ದದ ಜೊತೆಗೆ ಹಾಡುವುದು ನಂತರ ಉಸಿರು ತೆಗೆದುಕೊಳ್ಳುವಾಗ ಹಾಗೇಯೇ ಬೀಸುವುದು ಕಂಡುಬರುತ್ತದೆ. ಹಿಂದಿನ ಕಾಲದಲ್ಲಿ ಬೆಳಗ್ಗೆಯೇ ಎದ್ದು ಬೀಸುವ ಕುಟ್ಟುವ ಪದ್ಧತಿಯಿತ್ತು. ಕಾರಣ ಆಗ ಬೀಸುವ ವಿದ್ಯುತ್ ಗಿರಣಿಗಳು ಇರಲಿಲ್ಲ. ಮುಂಜಾನೆ ಕುಟ್ಟಿ, ಬೀಸಿದ ನಂತರವೇ ಆಹಾರ ಬೇಯಿಸುವ ರೂಢಿಯಿತ್ತು. ಅಂತೆಯೇ ಅದು ದಿನನಿತ್ಯದ ಕಾಯಕವಾಗಿ ಪರಿಣಮಿಸಿತ್ತು. ದೇಹಕ್ಕೆ ಬೇಸರಿಕೆ ದಣಿವು ಮಾಡಿಕೊಳ್ಳದೆ ಹಾಡುತ್ತ ಸಂತೋಷದಿಂದ ಕುಟ್ಟುತ್ತಿದ್ದರು. ಬೀಸುತ್ತಿದ್ದರು. ಏಳುತ ನೆನೆದೇವ. ಏಳುತ ನಿಮ್ಮ ಧ್ಯಾನ ಪದ್ಯಗಳಲ್ಲಿ ತುಂಬಾ ಸೊಗಸಾದ ಸಾಹಿತ್ಯ ಕಂಡು ಬರುತ್ತದೆ. ದೇವರನ್ನು ಸ್ಮರಿಸುತ್ತ ಕಾಯಕ ಮಾಡುವುದು ಅಂದಿನ ಜನರ ರೂಢಿಯಾಗಿತ್ತು.

ಏಳೂತ ನಿಮಧ್ಯಾನ ಎದ್ದೂನು ನಿಮ್ಮ ಧ್ಯಾನ।
ಸಿದ್ದನ ಧ್ಯಾನ ಶಿವಧ್ಯಾನವಾ ಶಿವನೇ।
ನಿದ್ದೆ ಗಣ್ಣಾಗೂ ನಿಮ್ಮ ಧ್ಯಾನ ॥ [೩೧]

ಜೊತೆಗೆ ಮನೆಯಲ್ಲಿದ್ದ ಮಕ್ಕಳ ಹೆಸರನ್ನು ಸಂದರ್ಭಕ್ಕನುಸಾರವಾಗಿ ಬಳಸಿಕೊಂಡು ಇತರ ಮಹಾನ್ ವ್ಯಕ್ತಿಗಳಿಗೆ ಹೋಲಿಕೆ ಮಾಡಿ ಹಾಡುವುದುಂಟು. ಊರಿನ ದೇವರನ್ನು ನೆನೆ ನೆನೆದು ಹಾಡುವುದುಂಟು. ಇಂತಹ ಒಂದು ಅದ್ಭುತ ಸಾಹಿತ್ಯವನ್ನು ನಾವು ಕುಟ್ಟುವ ಬೀಸುವ ಹಾಡುಗಳಲ್ಲಿ ಕಾಣುತ್ತೇವೆ.

ಹಳ್ಳದ ಹೊಲದಾಗ, ತಾರಂತ ತಿಳಿದು ಬಂದು ಹೋಗ, ಬಂಗಾರಬಳೆಯ ಮಂಗಳ ಗಿರಿಯ ಎಂಬ ಪ್ರೇಮಗೀತೆಗಳು ಕಂಡುಬರುತ್ತವೆ. ವಿಜಯ ಜೋಕರೆ, ಶಂಕರಮ್ಮ, ಭೀಮವ್ವ ಹಾಡಿದ ಹಾಡುಗಳಾಗಿವೆ. ಹೆಂಡತಿ ಗಂಡನ ಬರುವಿಕೆಯನ್ನು ಕಾಯುವ ಹೊಗಳುವ ವರ್ಣಿಸುವ ಪ್ರೇಮಗೀತೆಗಳಾಗಿವೆ. 'ತಾರಂತ ತಿಳಿದು ಬಂದು ಹೋಗ' ಎಂಬ ಶೀರ್ಷಿಕೆಯ ಗೀತೆಯು ಬೇಂದ್ರೆಯವರ ಇನ್ನು ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾವ ಎಂಬ ಗೀತೆಯನ್ನು ನೆನಪಿಸುವಂತಿದೆ.

ಬರ್ತೀನಿ ಎಂದಾವ ಇನ್ನಾ ಯಾಕ ಬರಲಿಲ್ಲ ।
ಇನ್ನಾ ಯಾಕ ಬರಲಿಲ್ಲ ನನರಾಯ । ಇಳಿಗಣ್ಣ ।
ಹೋಗ್ಯಾವ ನನಗ ಸಂಜ್ಯಾಗ ॥ [೩೨]

---

೩೧. ದುಂಡು ಮಲ್ಲಿಗೆ ಹೂವ ಬುಟ್ಟಲಿ ಬಂದಾವ ಸಹಸಂಪಾದಕರು ಡಾ. ಎಂ ಎಸ್. ವಾಲಿ ಪು. ಸಂಖ್ಯೆ [illegible]
೩೨. ದುಂಡು ಮಲ್ಲಿಗೆ ಹೂವ ಬುಟ್ಟಲಿ ಬಂದಾವ ಸಹಸಂಪಾದಕರು ಡಾ. ಎಂ ಎಸ್. ವಾಲಿ ಪು. ಸಂಖ್ಯೆ [illegible]

ಭಕ್ತಿ ಗೀತೆಗಳು ಐದನೆಯ ವಿಭಾಗದಲ್ಲಿ ಕಂಡುಬರುತ್ತವೆ. ಹತ್ತು ಭಕ್ತಿಗೀತೆಗಳಿವೆ. ಸರೋಜಾ ಮಾಡಬಾಳ, ವಿಜಯಾ ಲೋಕುರೆ, ಅರುಣಾವತಿ ಮಾನ್ವಿ, ಮಧುರಾಬಾಯಿ ಶರ್ಮಾ, ಗೌಡಪ್ಪ, ಶಾಂತಾಬಾಯಿ, ಶಕುಂತಲಾ, ನಿಜಲಿಂಗಪ್ಪ ಮುಂತಾದವರು ಹಾಡಿದ ಹಾಡುಗಳಾಗಿವೆ. ಹೊಸ ಹೊಲ ಮಾಡಬೇಕ, ಇಟಗೋ ಬಾಜುಬಂದ್, ಗುರುವಿನ ಮಠದಾಗ, ಮಳಿಯಪ್ಪಾ ಮಳಿರಾಜಾ, ಕಾಳಮ್ಮ ತಾಯಿ ಕಾಳಮ್ಮ, ಹನುಮ ಬಹಳ ಶೂರನವ್ವ, ಜಾತಿ ಸೂತಕವಿಲ್ಲ ಎಂಬ ಭಕ್ತಿ ಪ್ರಧಾನತೆಯಿಂದ ಕೂಡಿದ ಹಾಡುಗಳು.

ಮಳಿಯಪ್ಪ ಮಳಿರಾಜಾ ಕರಿಯತಾರೋ ನಿನ್ನ
ಮೊದಲು ಕೂರಿಗೆ ರೈತರು
ಮೊದಲು ಕೂರಿಗೆ ರೈತರು
ಫಲವೆದ್ದು ಕೈಯ್ಯ ಮುಗಿದಾರೋ [೩೩]

ಎಂಬಲ್ಲಿ ಹಳ್ಳಿಯ ಮುಗ್ಧ ರೈತರು ಭಕ್ತಿಯಿಂದ ಮೇಘರಾಜನನ್ನು ಆಹ್ವಾನ ಮಾಡಿಕೊಂಡು ಸ್ತುತಿಸಿ ಬೆಳೆ ಬೆಳೆಯಲು ಸಿದ್ಧರಾಗುವ ಸಂಕೇತ ಕಂಡು ಬರುತ್ತದೆ.

ಓಮ್ಮೇಳ ಮುಮ್ಮೇಳವಾಗಿ ಹಾಡುವ ಸೋಬಾನ ಹಾಡುಗಳನ್ನು ಕೇಳುವುದೇ ಒಂದು ಕಿವಿಗೆ ಇಂಪು. ಸುಮಾರು ಹನ್ನೊಂದು ಸೋಬಾನ ಹಾಡುಗಳನ್ನು ವಾಲಿಯವರು ಸಂಗ್ರಹಿಸಿ ಬರೆದಿದ್ದಾರೆ. ಮಹಾಲಕ್ಷ್ಮೀ ಹಾಡು, ದುಂಡು ಮಲ್ಲಿಗಿ ಹೂವ ಬುಟ್ಟಲಿ ಬಂದಾವ, ಬುಟ್ಟಿ ಬುಧವಾರ ದಿನ ಗುಣವಂತಿ ಮೈನೆರೆದ, ಕೊಡಗಿನ ಹೊತ್ತು ಕೈ ಬಿಟ್ಟು ನಡೆದ ಬರುತಿದೆ. ಬಾಗುತ್ತಾ ಬಳಕುತ ಬಲಗಾಲ ಹಾಕ, ಕಂಚು ಬಾರ ಕಳಸ ಬಾರ, ಹೇಮರೆಡ್ಡ್ಯಾರ ಸೊಸಿಗೆ ನೀರ್ಯಾರ ಎರದಾರ, ಹೆಣಿಯ ಭಾವನ ನೋಡಿ, ದಂಪತಿಗಳಲ್ಲಿ ವೀಳ್ಯದ ವಿನಿಮಯ, ಬಾಳಿ ಬನದಾಗ ನಾ ಬಂದೆ, ಮೂರು ಲೋಕದ ಒಡೆಯ ಎಂಬ ಸೋಬಾನ ಹಾಡುಗಳು ಸಮಾವೇಶಗೊಂಡಿವೆ. ಈ ಸೋಬಾನ ಹಾಡುಗಳನ್ನು ಮದುವೆಯಲ್ಲಿ ಅರಿಸಿನ ಹಚ್ಚುವ ಸಂದರ್ಭದಲ್ಲಿ, ಹೆಣ್ಣು ಮಕ್ಕಳ ಸೀಮಂತ ಕಾರ್ಯಕ್ರಮದಲ್ಲಿ, ಹೆಣ್ಣುಮಕ್ಕಳು ಮೈನೆರೆದು ದೊಡ್ಡವರಾದ ಸಂದರ್ಭದಲ್ಲಿ ಹೇಳಲಾಗುತ್ತದೆ.

ಸುಮಾರು ನಾಲ್ಕು ಸಂವಾದ ಗೀತೆಗಳು ಇಲ್ಲಿ ಉಲ್ಲೇಖಗೊಂಡಿವೆ 'ಮಾಂಗಲ್ಯದ ಬಗೆಗೆ' ಎಂಬ ಗೀತೆ ಅಕ್ಕ ತಂಗಿಯರ ಸಂವಾದವಾಗಿದೆ. 'ಗಂಗಿ ಗೌರಿ ಸಂವಾದ' ಎಂಬುದು ಸಂವಾದ ರೂಪದಲ್ಲಿದ್ದು ಅದರಿಂದ ಆ ಹಾಡಿನ ಅರ್ಥ ಆಶಯ ಕೇಳುಗರಿಗೆ ಸ್ಪಷ್ಟವಾಗುತ್ತದೆ. ಇಲ್ಲಿ ಶ್ರೀಮತಿ ಸೂಸಾ ಅಂಗಡಿ ಮತ್ತು ಎಂಕೂಬಾಯಿ ತಾಳಪಲ್ಲೆ ಅವರು ಹಾಡಿದ ಹಾಡಾಗಿದೆ.

೩೩. ದುಂಡಮಲ್ಲಿಗೆ ಹೂವ ಬುಟ್ಟಿಲಿ ಬಂದಾವ " ಸಂಪಾದಕರು ಡಾ॥ ಎಂ ಎನ್ ವಾಲಿ ಪುಟ ಸಂಖ್ಯೆ ೪೧ ಪ್ರ ವರ್ಷ ೧೯೯೫

ಜೊತೆಗೆ ಹಂತಿಯ ಹಾಡುಗಳು ಕಂಡುಬರುತ್ತವೆ. ದಿಟ್ಟಗಲ್ಲಿನ ಮ್ಯಾಲ ಹುಟ್ಯಾದ ತಾಳಿಕೋಟ, ಹಂತಿಯ ಹೂಡುತಲಿ ಎಂಥವನ ನೆನಿಬೇಕ, ಕೊಂಡೆಕಲ್ಲನೆಂಬುವುದು ಕೋಟೆಯ ಕೊತ್ತಲ ಎಂಬ ಹಾಡುಗಳನ್ನು ಗೌಡಪ್ಪಗೌಡ, ವೀರಭದ್ರಪ್ಪ, ಸಂಗಪ್ಪ ಬಾಣೂರು ಹಾಡಿದ್ದಾರೆ. ರಾಶಿ ಮಾಡುವ ಸಂದರ್ಭದಲ್ಲಿ ಹಾಡುವ ಹಾಡುಗಳು ಈ ಹಂತಿ ಹಾಡುಗಳು. ನಾಗರ ಪಂಚಮಿ, ದೀಪಾವಳಿ, ಮುಂತಾದ ಹಬ್ಬಗಳನ್ನು ಕುರಿತು ಹಲವಾರು ಹಾಡುಗಳು ಕಂಡಬರುತ್ತವೆ. ಜೆಟಗೇರಿ ಕೃಷ್ಣ ಶರ್ಮರ 'ಪಂಚಮಿ ಹಬ್ಬ ಉಳದಾವ ದಿನಾ ನಾಕು' ಎಂಬ ಹಾಡು ಬಹಳ ಹೆಸರು ವಾಸಿಯಾಗಿದೆ. ಹಬ್ಬಗಳಿಗೆ ಸಂಬಂಧಿಸಿದ ೫ ಹಾಡುಗಳು ಕಂಡು ಬರುತ್ತವೆ. ಹಬ್ಬಗಳಿಗೆ ಹೆಣ್ಣು ಮಕ್ಕಳನ್ನು ಕರೆದುಕೊಂಡು ಬರುವ ಸಂದರ್ಭದ ಚಿತ್ರಣ. ಸಹೋದರರ ದಾರಿಯನ್ನು ಸಹೋದರಿ ಕಾಯುವ ಚಿತ್ರಣ ಈ ಹಾಡುಗಳಲ್ಲಿ ಕಂಡು ಬರುತ್ತದೆ.

ಪಂಚಮಿ ಹಬ್ಬಾ। ಪಂಚಮಿ ಹಬ್ಬಾ ಉಳದಾವ ದಿನಾ ನಾಕ.।
ಅಣ್ಣ ಬರಲಿಲ್ಲ ಯಾಕೋ ಕರಿಲಾಕ॥
ನಮ್ಮ ತವರೂರು ಚಿಂಚೋಳಿ ನಗರ।
ಮನಿ ಎಂಥಾ ರಾಜಮಂದಿರ ।
ನಮ್ಮ ಅಣ್ಣಯ್ಯ । ನಮ್ಮ ಅಣ್ಣಯ್ಯ ದೊಡ್ಡ ಸಾವಕಾರ ।
ಹ್ಯಾಂಗ ಆದೀತ ಬಿಟ್ಟು ಇರಲಾಕ ॥ [೩೪]

ಗೆಜ್ಜೆ ಕಟ್ಟಿಕೊಂಡು ಕೋಲು ಹಾಕುತ್ತ ಹಾಡುವ ಮೇಳಗೀತೆಗಳೇ 'ಕೋಲುಪದಗಳು' ಇಂತಹ ಸುಮಾರು ೬ ಕೋಲುಪದಗಳ ಸಂಗ್ರಹ ಇಲ್ಲಿವೆ. ಈ ಹಾಡುಗಳ ವಿಷಯ ವೈವಿಧ್ಯಮಯ ತಾಳಕ್ಕೆ ಸರಿಯಾಗಿ ಕುಣಿತ, ಕುಣಿತದ ಸರಿಯಾಗಿ ಕೋಲಿನ ಬಡಿತದ ಸಪ್ಪಳ, ನೋಡುಗರ ಕಣ್ಣಿಗೆ ಹಬ್ಬ, ಕಿವಿಗೆ ಇಂಪು ತೋರುತ್ತದೆ. ಇಲ್ಲಿ ಬರುವ ಹಾಡುಗಳೊಂದಿಗೆ ಕೊಳಲು, ತಾಳ ದಮಡಿಗಳನ್ನು ಬಳಸಿಕೊಂಡವುಗಳಾಗಿವೆ. ಕಾಶೀಮ ಗೌಡನ ಹಾಡು, ದ್ವಿಪದಿಯಲ್ಲಿ ರಚನೆಯಾಗಿದೆ. ಅಂಬವ್ವ, ಯಲ್ಲವ್ವ, ಮಲ್ಲವ್ವ, ಉಂಡುಂಡ ಸುಲಿಪಲ್ಲ ಎಂಬ ಹಾಡನ್ನು ಹಾಡಿದ್ದಾರೆ. ಮಧುರಾಬಾಯಿ ಹಾಡಿರುವ ಶ್ಯಾವಕ್ಕಿ ಕುಟ್ಟಂದ್ರ, ಒಂದಕಾಲ ನಿಜ್ಜಣಕಿ, ಯಲ್ಲವ್ವ ತಾಳಿಕೋಟೆ ಹಾಡಿರುವ ಅಪ್ಪನ ಶರಣರಿಗೆ, ಮತ್ತು ನಾಗರ ಪಂಚಮಿ ಕೋಲುಪದ ದ್ವಿಪದಗಳಲ್ಲಿ ಕಂಡುಬರುತ್ತವೆ.

ಇಪ್ಪತ್ತೊಂದು ಭಜನಾ ಹಾಡುಗಳನ್ನು ವಾಲಿಯವರು ಕ್ಯಾಸೆಟ್ಟು ಸಹಾಯದಿಂದ ಬರೆದಿದ್ದಾರೆ. ಭಜನಾ ಪದಗಳು ಭಕ್ತಿಯ ತರಂಗಗಳೂ ಹಳ್ಳಿಯ ಗುಡಿಯಲ್ಲಿಯೋ ಮಠದಲ್ಲಿಯೋ ಹತ್ತೆಂಟು ಜನರು ಮೇಳಗೂಡಿ ಈ ಹಾಡುಗಳನ್ನು ಹಾಡುವರು. ಏಕತಾರಿ,

---

೩೪) ದುಂಡು ಮಲ್ಲಿಗೆ ಹೂವ ಬುಟ್ಟಲಿ ಬಂದಾವ ಸಹಸಂಪಾದಕರು ಡಾ. ಎಂ.ಎಸ್.ವಾಲಿ ಪು.ಸಂ ೭೮ ಪ್ರವ ೧೯೯೫

ತಾಳ, ದಮಡಿಗಳನ್ನು ಹಾಡಿನೊಂದಿಗೆ ಉಪಯೋಗಿಸಲಾಗುತ್ತದೆ. ಇತ್ತೀಚೆಗೆ ಕೆಲವಡೆ ಹಾರ್ಮೋನಿಯಂ ಬಳಸುತ್ತಾರೆ. ಈಗಿನ ಕೆಲವು ಹಳ್ಳಿಗಳಲ್ಲಿ ಭಜನಾ ಮಂಡಳಿಗಳೇ ರಚನೆಗೊಂಡಿವೆ. ಇಲ್ಲಿ ಹಾಡುವ ಭಕ್ತಿ ಪೂರ್ವಕ ಗೀತೆಗಳು ಕೇಳುಗರನ್ನು ಭಕ್ತಿಪರವಶರನ್ನಾಗಿಸುತ್ತದೆ. ನೀತಿಯೇ ಈ ಹಾಡುಗಳ ಜೀವಾಳವಾಗಿದೆ.

'ಮೀನಿನ ಭಕ್ತಿ' ಎಂಬ ಭಜನಾ ಪದ ಭಕ್ತಿಯ ಆಧಿಕ್ಯವನ್ನು ಮನವರಿಕೆ ಮಾಡಿಕೊಡುತ್ತದೆ.

ಗಂಡ ಹೆಣ್ಣ ಎರಡು ಮೀನ ಇದ್ದಾವರಿ ।
ಹೊಳಿಯ ಮಡುವಿನಲ್ಲಿ ಭಾಳ ಜತಿ॥
ಗಂಡ ಮೀನಿನ ಭಕ್ತಿ ಕೇಳರಿ ।
ಸಾಂಬನ ಮ್ಯಾಲ ಅದು ಭಾಳ ರತಿ॥ [೩೫]

ಎಂಬ ನಾಲ್ಕು ಸಾಲುಗಳಿಂದ ಸಾಗುವ ಪದ್ಯ ಭಕ್ತಿಯ ಕಥಾನಕ ಶೈಲಿಯನ್ನು ಹೊತ್ತು ತರುತ್ತದೆ. ಜೊತೆಗೆ ಭವಸಾಗರವನ್ನು ದಾಟಿಸಲು 'ಅಂಬಿಗರಣ್ಣ' ಎಂಬ ಪರಮಾತ್ಮನನ್ನು ಪ್ರಾರ್ಥಿಸುವ ಗೀತೆ ಅನುಪಮ. ಈ ಭಜನಾ ಹಾಡುಗಳು ನಮ್ಮ ಬಾಳಿನ ದಾರಿದೀಪಗಳಾಗಿವೆ. ಇಲ್ಲಿ ಸಂಗ್ರಹಗೊಂಡ ಎಲ್ಲ ಹಾಡುಗಳೂ ಸುಂದರವಾಗಿವೆ.

ಅನುಭಾವ ಪದಗಳು ಇಲ್ಲಿಯ ಮತ್ತೊಂದು ವಿಭಾಗ ಇವನ್ನು ಏಕತಾರಿ ಪದಗಳೆಂದು, ತತ್ವ ಪದಗಳೆಂದು ಕರೆಯುತ್ತಾರೆ. ಅನುಭಾವಿಗಳು ಕಂಡುಂಡ ಸತ್ಯವನ್ನು ಈ ಹಾಡುಗಳಲ್ಲಿ ಕಾಣುತ್ತೇವೆ. ನಾವು ಹೇಗೆ ಬದುಕಬೇಕು, ಬಾಳಬೇಕು, ಮಾನವ ಜನ್ಮದ ಮಹತ್ವ ಯಾವುದು ಹೇಗೆ ಎಂಬ ಮೊದಲಾದ ವಿಷಯಗಳು ಇಲ್ಲಿ ಪ್ರತಿಪಾದಿತವಾಗಿವೆ. ಇಲ್ಲಿ ಕೆಲವೊಂದು ಮುಂಡಿಗೆ ಪದಗಳಿವೆ. ಹಾಗೆನ್ನಲು ಅವು ನೇರವಾದ ಅರ್ಥ ಕೊಡುವುದಿಲ್ಲ. ಇಲ್ಲಿ ಸುಮಾರು ಹತ್ತೊಂಭತ್ತು ಅನುಭಾವ ಪದಗಳು ಸಂಗ್ರಹವಾಗಿವೆ. ಮಹಿಬೂಬ ಕುಂದರವಾಡಿ, ಸುಶಾಚನ ವಂದಾಲ, ಶ್ರೀಮತಿ ಯಮನವ್ವ, ತಿಮ್ಮಪ್ಪ ದಾಸರ, ಸಿದ್ಧಪ್ಪ ಪೂಜಾರಿ, ರಾಚಪ್ಪ ಬಳಬಟ್ಟಿ, ಮಲ್ಲಿಂಗಪ್ಪ, ರತ್ನಪ್ಪ ಹಡಪದ, ಮುಂತಾದವರು ಹಾಡಿದ್ದಾರೆ.

ಈ ಸಂಗ್ರಹದಲ್ಲಿ ಐದು ಕಥನ ಗೀತೆಗಳಿದ್ದು ಸಾಹಿತ್ಯಿಕವಾಗಿ ಉತ್ಕೃಷ್ಟವಾದವುಗಳು. ಒಂದು 'ಕೆರೆಗೆ ಹಾರ' ಎಂಬ ಕಥೆಯನ್ನು ಆಧರಿಸಿದರೆ ಇನ್ನೊಂದು 'ಕಿತ್ತೂರ ಕಾಶಿಬಾಯಿ'ಯು ತನ್ನ ಪಾತೀವ್ರತ್ಯವನ್ನು ಉಳಿಸಿಕೊಳ್ಳಲು ಪಟ್ಟಪಾಡನ್ನು ಒಳಗೊಂಡಿದೆ. ಇಲ್ಲಿರುವ ಕಥನ ಗೀತೆಗಳು ಕರುಣ ರಸದ ಮಡುಗಳಾಗಿವೆ. ಹಾಡು ಮುಂದುವರೆಯುತ್ತಿದ್ದಂತೆ ಚಿತ್ರ ಪಟದ ಚಿತ್ರಗಳು ಸಾಗಿದ ಅನುಭವವಾಗುತ್ತದೆ. ಶ್ರೀ ಮಹಾಂತೇಶ ಚಿನಿವಾಲದಾರ, ವಿಜಯಾ ಲೋಕರೆ, ಕೊಟಬಾಳದ ಮೇಳದವರು ಹಾಡಿದ್ದಾರೆ.

---

೩೫. ದುಂಡು ಮಲ್ಲಿಗೆ ಹೂವ ಬುಟ್ಟಲಿ ಬಂದಾವ ಸಹಸಂಪಾದಕರು ಡಾ. ಎಂ ಎಸ್. ಪಾಲಿ ಪು. ೩೦ ೧೦೩ ಪ್ರ. ವರ್ಷ ೧೯೯೯

ಚೌಡಿಕೆ ಎಂಬ ಚರ್ಮವಾದ್ಯದೊಂದಿಗೆ ಹಾಡುವ ಸುಮಾರು ೨೩ ಹಾಡುಗಳು ಇಲ್ಲಿ ಸಂಗ್ರಹವಾಗಿವೆ. ಶಕ್ತಿ ದೇವಿ ಯಲ್ಲಮ್ಮನ ಮಹಿಮೆ, ಅವಳ ಪೂಜೆ, ಜಾತ್ರೆ, ಸೌದತ್ತಿಯ, ಏಳುಕೊಳ್ಳದ ವರ್ಣನೆ, ಸ್ಥಳ ಮಹಾತ್ಮೆಯ, ದೇವಿಯ ಚರಿತ್ರೆ, ಪರಶುರಾಮನ ಮುಗ್ಧ ಭಕ್ತಿ ಮೊದಲಾದ ಸಂಗತಿಗಳು ನಿರೂಪಿತವಾಗಿವೆ. ಕೂಚಬಾಳದ ಯಮನವ್ವ, ರೇಣುಕವ್ವ, ಬಸವ್ವ, ಯಲ್ಲವ್ವ, ತಮದಡ್ಡಿ, ಮತ್ತು ಓರೂರಿನ ಚೆನ್ನಮ್ಮ, ಯಮನವ್ವ, ಕಾಶೀಬಾಯಿ ಹಾಡಿದ ಹಾಡುಗಳಾಗಿವೆ.

ಇಲ್ಲಿ ಸಂಗ್ರಹಗೊಂಡಿರುವ ಗೀಗೀ ಹಾಡುಗಳು ಜಾನಪದದ ಒಂದು ಪ್ರಕಾರ. ಆರಂಭದಲ್ಲಿ ಸಾಮಾನ್ಯವಾಗಿ ಗಣಪತಿ ಸ್ತುತಿ ಇರುವುದು. ಇಲ್ಲಿ ೨ನೇ ಹಾಡಿನಲ್ಲಿ ನಮಸ್ಕಾರದ ಚಮತ್ಕಾರವಿದೆ. ಕೊಟಬಾಳದ ನಿಂಗಪ್ಪ, ಮತ್ತು ಸಂಗಡಿಗರು ಹಾಡಿದ ಹಾಡು ಇದಾಗಿದೆ. ಶಿಶುನಾಳ ಶರೀಫರ ಅಂಕಿತವಿರುವ ನಂಜಕಿಯ ಗಾಯ ಹಾಡಿನಲ್ಲಿ ನಾಯಿಯನ್ನು ಸಾಕಬೇಕಾದ ಅನಿವಾರ್ಯವನ್ನು ನಿರೂಪಿಸಲಾಗಿದೆ. 'ಬಿತ್ತುವ ಕಾಲದ ಶಕುನ' ಎಂಬ ಪದ್ಯದಲ್ಲಿ ಭೂಮಿಗೆ ಬೀಜ ಬಿತ್ತುವಾಗಿನ ನಿಯಮಾವಳಿಗಳನ್ನು ಶುಭಾಶುಭ ಶಕುನಗಳ ವಿಶ್ಲೇಷಣೆ ಕಂಡು ಬರುತ್ತದೆ. ಭಾರತ ಮಾತೆಯ, ಕನ್ನಡಾಂಬೆಯ ಘನತೆ ಗೌರವಗಳನ್ನು ಸೂಚಿಸುವ ಹಾಡುಗಳು ಕಂಡು ಬರುತ್ತವೆ.

ರಿವಾಯತ ಹಾಡುಗಳು, ಜನಪದ ಸಾಹಿತ್ಯದ ಅಂಗವೆಂದು ಪರಿಗಣಿಸಲಾಗುತ್ತದೆ. ಇವುಗಳನ್ನು ಸಾಮಾನ್ಯವಾಗಿ ಮುಸ್ಲಿಂ ಬಾಂಧವರು ಹಾಡುತ್ತಾರೆ. ಈ ಹಾಡುಗಳಲ್ಲಿ ಮುಸ್ಲಿಂ ಸಂತರ ಚರಿತ್ರೆ, ಕುರಾಣದ ಪಾವಿತ್ರ್ಯತೆ, ಮೊಹರಂ ಹಬ್ಬದ ವರ್ಣನೆ, ಪೈಗಂಬರರ ಆಶಯ ಮೊದಲಾದ ಸಂಗತಿಗಳ ಚಿತ್ರಣ ದೊರೆಯುವುದು. ರಿವಾಯತ ಉರ್ದು ಹಾಗೂ ಪಾರಸೀಯ ಶಬ್ದಗಳು ಹೇರಳವಾಗಿ ಬೆರಕೆಯಾಗಿವೆ. ಸುಮಾರು ೭ ಪದಗಳು ಇಲ್ಲಿ ಸಂಗ್ರಹಗೊಂಡಿವೆ.

ಮೈಲಾರಲಿಂಗನ ಹಾಡುಗಳು ಈ ಸಂಗ್ರಹದಲ್ಲಿ ಎರಡು ಮಾತ್ರ ಬಂದಿವೆ. ಅವು ಸಾಮಾನ್ಯ ಹಾಡುಗಳು. ವೀರಭದ್ರ ದೇವರ ಒಡಪುಗಳು ಗದ್ಯದಲ್ಲಿವೆ. ನಡುವೆ ಪ್ರಾಸಂಗಿಕವಾಗಿ ಒಂದೊಂದು ಪದ್ಯ ಬರುವುದುಂಟು. ಈ ಸಾಹಿತ್ಯದಲ್ಲಿ ವೀರಭದ್ರದೇವರ ಚರಿತ್ರೆ, ಅವತಾರ ದಕ್ಷ ಬ್ರಹ್ಮನ ಯಜ್ಞವನ್ನು ನಾಶ ಮಾಡಿದ ಸಂಗತಿಗಳು ನಿರೂಪಿತವಾಗಿವೆ. ಇಲ್ಲಿನ ಯಾವ ವಿಭಾಗಕ್ಕೂ ಸುಲಭವಾಗಿ ಸೇರಲಾರದ ೮ ಹಾಡುಗಳನ್ನು ಸಂಕೀರ್ಣ ವಿಭಾಗದಲ್ಲಿ ಕೊಡಲಾಗಿದೆ. ಇಲ್ಲಿಯ ಹಾಡುಗಳು ೧೩ ಕ್ಯಾಸೆಟ್ಟುಗಳಲ್ಲಿ ೧೨ ಕ್ಯಾಸೆಟ್ಟುಗಳನ್ನು ವಿಜಾಪೂರ ಜಿಲ್ಲೆಯ ತಾಳಿಕೋಟೆಯಲ್ಲಿ ಧ್ವನಿ ಮುದ್ರಿಸಿಕೊಳ್ಳಲಾಗಿದೆ. ಉಳಿದ ಒಂದು ಕ್ಯಾಸೆಟ್ಟು ಕಲಬುರ್ಗಿಯಲ್ಲಿ ಧ್ವನಿಮುದ್ರಿಸಿಕೊಂಡುದುದಾಗಿದೆ. ಆದ್ದರಿಂದ ಇಲ್ಲಿಯ ಹಾಡುಗಳು ಬಹುಪಾಲು ವಿಜಾಪೂರ

ಜಿಲ್ಲೆಯವು. ಬಿಜಾಪೂರ ಜಿಲ್ಲೆಯು ಉತ್ತರ ಕರ್ನಾಟಕದ ಜಾನಪದದ ತವರೂರು. ಹೀಗಾಗಿ ಈ ಸಂಗ್ರಹಕ್ಕೆ "ದುಂಡ ಮಲ್ಲಿಗೆ ಹೂವ ಬುಟ್ಟೀಲಿ ಬಂದಾವ" ಶೀರ್ಷಿಕೆಯೊಂದಿಗೆ "ಉತ್ತರ ಕರ್ನಾಟಕದ ಜನಪದ ಗೀತೆಗಳು" ಎಂಬ ಶೀರ್ಷಿಕೆಯನ್ನು ಉಳಿಸಿಕೊಳ್ಳಲಾಗಿದೆ.

**"ಆಯ್ದ ಗಾದೆಗಳು" :**

'ಆಯ್ದ ಗಾದೆಗಳು' ಎಂ. ಎಸ್. ವಾಲಿಯವರ ಸಂಪಾದಿತ ಕೃತಿಗಳಲ್ಲಿ ಒಂದು. ಇದು ತಮ್ಮದೇ ಭುವನೇಶ್ವರಿ ಪ್ರಕಾಶನ (ಬಿಜಾಪೂರ)ದ ವತಿಯಿಂದ ೨೦೦೫ ರಲ್ಲಿ ಪ್ರಕಟಗೊಂಡಿತು. ಆಕರ್ಷಕ ಸುಂದರವಾದ ಮುಖ ಪುಟದೊಂದಿಗೆ ಮುದ್ರಣಗೊಂಡಿದೆ. ಇದುವರೆಗೆ ಸಾವಿರಾರು ಕೃತಿಗಳು ಓದುಗ ಪ್ರಿಯರ ಕೈಗೆ ದೊರಕಿವೆ. ಈ ಕೃತಿಗೆ ಡಾ. ಎಂ ಎಸ್ ವಾಲಿಯವರೇ ಅರ್ಥಪೂರ್ಣ ಪ್ರಸ್ತಾವನೆ ಬರೆದಿರುವರು. ಇವರ ೩೫ ನೇ ಗ್ರಂಥ ಇದಾಗಿದೆ. ಇದರಲ್ಲಿ ಸಮಾವೇಶವಾದ ಗಾದೆಗಳು ಸುಮಾರು ಒಂದೂವರೆ ದಶಕದಷ್ಟು ಹಿಂದೆ ಸಂಗ್ರಹಿಸಿದವುಗಳಾಗಿವೆ. ಇವರಲ್ಲಿ ಸುಮಾರು ೧೫೦೦ ರಷ್ಟು ಗಾದೆಗಳು ೧೦ ವಿಭಾಗದಲ್ಲಿ ಅಕಾರಾದಿಯಾಗಿ ಬಂದಿವೆ. ಜಾನಪದವನ್ನು ಉಳಿಸುವ ಮಹತ್ಕಾರ್ಯದಲ್ಲಿ ಇದೊಂದು ಸಣ್ಣ ಅಳಿಲು ಸೇವೆ ಎಂದಿರುವ ವಾಲಿಯವರ ಮಾತು ಅವರ ಬಗೆಗೆ ಗೌರವವನ್ನು, ಆಸಕ್ತಿಯನ್ನು, ಮತ್ತಷ್ಟು ಎತ್ತರಕ್ಕೊಯ್ಯುತ್ತದೆ.

ಮಾನವ ಆಲೋಚನಾ ತರಂಗಗಳಷ್ಟೆ ಹಳೆಯದಾಗಿರುವ ಗಾದೆಗಳು ಜನಸಾಮಾನ್ಯರ ಬದುಕಿನ ಹರ್ಷೋಲ್ಲಾಸ ಮತ್ತು ದುಃಖ ದುಮ್ಮಾನದ ಎರಡೂ ಬಗೆಯ ಕ್ಷಣಗಳನ್ನು ಅತ್ಯಂತ ಆತ್ಮೀಯವಾದ ಧಾಟಿಯಲ್ಲಿ ಸೆರೆಹಿಡಿದಿಟ್ಟಿರುವುದನ್ನು ವಿಶೇಷವಾಗಿ ಕಾಣುತ್ತೇವೆ. ಅನುಭವದ ಸಾಮಗ್ರಿ ಹಾಗೂ ಸಂವೇದನೆಯ ತೀವ್ರತೆ ಇರುವುದೇ ಹೌದಾದಲ್ಲಿ ಎಂಥ ವಿಶಿಷ್ಟ ರಚನೆಗಳು ಬಗೆಬಗೆಯಾಗಿ ರೂಪಗೊಳ್ಳಬಲ್ಲವೆಂಬುದಕ್ಕೆ ಸಾಕಷ್ಟು ಉತ್ತಮ ಉದಾಹರಣೆಗಳು. ನಮ್ಮ ಗಾದೆಗಳ ಲೋಕದಲ್ಲಿ ದೊರೆಯುತ್ತವೆ.

ಜನತೆಯ ಅನುಭವದ ಸಂಪತ್ತು ನೆನಪಿಡಲು ಸುಲಭವಾಗುವಂತೆ ಪ್ರಾಸ ಬದ್ಧವಾಗಿ ಚಿಕ್ಕವಾಕ್ಯಗಳಾಗಿ ಗಾದೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಗಾದೆಯೆನ್ನುವ ಪದ ಸಂಸ್ಕೃತದ ಗಾಥಾ, ಪ್ರಾಕೃತದ ಗಾದೆಯ ಮೂಲಕ ಬಂದಿದೆ. ನಾಲ್ಕು ಕಾಲ ಬಾಳುವ ಯೋಗ್ಯತೆ ಗಳಿಸಿರುವ ಗಾದೆಯು ಜನಪ್ರಿಯತೆಯನ್ನು ಪಡೆದುಕೊಂಡಿದೆ. ಸಮುದಾಯದ ಮನಸ್ಸು ಗಾದೆಗಳಲ್ಲಿ ಅಡಕವಾಗಿದೆ. ಅದು ನುಡಿಯ ತೀವ್ರತೆ ಇನ್ನಷ್ಟು ಪ್ರಖರವಾಗಿ ಬೇರೆಯ ಕಡೆ ಕಂಡಿರುವ ಸನ್ನಿವೇಶಗಳು ತುಂಬಾ ಕಡಿಮೆ. ಅಡಕವಾಗಿರುವಿಕೆ, ವಿವೇಕ, ಮೊನಚು, ಸಾಚಾತನ ಹೇಳುವ ರೀತಿಯಲ್ಲಿ ವೈವಿಧ್ಯ ಇವೆಲ್ಲ ಗಾದೆಯಲ್ಲಿ ಕಂಡುಬರುತ್ತವೆ. ಪ್ರಾಸ, ಅನುಪ್ರಾಸ, ಉಪಮೇಯ, ರೂಪಕ, ಶೈಲಿ, ತಂತ್ರ, ಛಂದಸ್ಸು, ನಾಟಕೀಯತೆ, ಮಾತುಗಾರಿಕೆ, ವಿರೋಧಾಭಾಸ ಮುಂತಾದ ಎಲ್ಲಕ್ಕೂ ಉತ್ತಮ ಉದಾಹರಣೆಗಳಾಗಿ ಈ ಗಾದೆಗಳು ಕಂಡುಬರುತ್ತವೆ.

ಪುರಾಣ, ಚರಿತ್ರೆ, ಸ್ಥಳಗತೆ, ಅನುದಿನದ ಘಟನೆಗಳು, ಕಷ್ಟಕೋಟಲೆಗಳು ಮತ್ತು ಆನಂದದ ವಿಶಾಲ ಹಿನ್ನೆಲೆ ಹೊಂದಿರುವ ಈ ಗಾದೆಗಳು ನಾಡಿನ ಜನತೆಯ ಮನಸ್ಸನ್ನು ಅರ್ಥಮಾಡಿಕೊಳ್ಳಲು ವಿಶೇಷವಾಗಿ, ಬದುಕನ್ನು ತಿದ್ದುವಲ್ಲಿ, ರಹಸ್ಯಗಳ ಬೆನ್ನಾಡಿ ಹೋಗುವಲ್ಲಿ ಇವು ಯಾವಾಗಲೂ ಮುಂದಾಗಿರುತ್ತವೆ. ಬಾಯಿಂದ ಬಾಯಿಗೆ ಬರುತ್ತಿರುವ ಗಾದೆಗಳು ಮಾನವನ ಅನುಭವದ ಅತ್ಯುತ್ತಮ ದಾಖಲೆಯಾಗಿವೆ. ಸಾಮಾನ್ಯವಾಗಿ ಶಿಷ್ಟ ಜನ ಪರಿಗಣಿಸದೇ ಬಿಟ್ಟ ಅನೇಕ ಸೂಕ್ಷ್ಮಗಳು ಇಲ್ಲಿ ಪರಿಣಾಮಕಾರಿಯಾಗಿ ಕಂಡುಬರುತ್ತವೆ. ಒಬ್ಬನೇ ವ್ಯಕ್ತಿ ಆರಂಭದಲ್ಲಿ ಅನುಭವದ ವಿಶೇಷವೊಂದಕ್ಕೆ ಬೇರೊಬ್ಬನ ಮನಸ್ಸನ್ನು ತಟ್ಟುವಂತೆ ಕೊಟ್ಟ ಮಾತಿನ ರೂಪವೇ ಈ ಗಾದೆಗಳಾಗಿವೆ.

ಒಂದು ದೇಶದ, ಕಾಲದ, ನಿಜವಾದ ಬಗ್ಗೆ, ಬದುಕು ಗಾದೆಗಳ ಮೂಲಕ ಬಯಲಾಗುತ್ತವೆ. ಜನತೆಯಲ್ಲಿ ಜೀವನ, ವ್ಯವಹಾರ, ರೋಷ, ಕೆಚ್ಚು, ಮೌಢ್ಯ, ಮಾನಸಿಕ ವಿಕಾರ, ಜಾತೀಯತೆ, ಹಾಸ್ಯ, ನೋವು, ನ್ಯಾಯ ಅನ್ಯಾಯ, ಐತಿಹಾಸಿಕ, ಪೌರಾಣಿಕ, ಎಲ್ಲ ಸಂಗತಿಗಳು ಇಲ್ಲಿರುವ ಗಾದೆಗಳಲ್ಲಿವೆ. ಇವನ್ನೆಲ್ಲ ವಿಂಗಡಿಸಿ ನಿತ್ಯದ ಬದುಕಿಗೆ ಹೇಗೆ ಬಳಸಿಕೊಳ್ಳುವುದು ಎನ್ನುವುದು ಮುಖ್ಯ ಸಂಗತಿ. ಈ ನಿಟ್ಟಿನಲ್ಲಿ ಡಾ. ಎಂ.ಎಸ್. ವಾಲಿಯವರ ಈ ಸಂಗ್ರಹ ಉದಾಹರಣೆಯಾಗಿದೆ. ಜೊತೆಗೆ ಸಮಾಜ, ಸಾಹಿತ್ಯ, ಚರಿತ್ರೆ, ಭಾಷೆ, ಮನಸ್ಸು, ಮಾನವ ಬದುಕಿನ, ವೈಶಿಷ್ಟ್ಯಗಳು ಮುಂತಾದ ಬಗೆ ಬಗೆಯ ವಿಷಯಗಳ ಬಗ್ಗೆ ಅಧ್ಯಯನ ನಡೆಸುವವರಿಗೆ ಗಾದೆಗಳು ಸವಾಲಾಗಿವೆ. ಮತ್ತು ಹೆಚ್ಚಿನ ಗುಟ್ಟುಗಳನ್ನು ತಿಳಿಸುತ್ತವೆ. ಅಂತಹ ಮಾದರಿಯ ಸಂಗ್ರಹ ವಾಲಿಯವರ "ಆಯ್ದ ಗಾದೆಗಳು".

"ಆಯ್ದ ಗಾದೆಗಳು" ಹತ್ತು ವಿಭಾಗಗಳನ್ನು ಹೊಂದಿದ್ದು ಅವು ಕೃಷಿರಂಗ, ವ್ಯವಹಾರ, ದಡ್ಡತನ, ಜಾತೀಯತೆ, ಊಟೋಪಚಾರ, ಹಾಸ್ಯರಸ, ಐತಿಹಾಸಿಕ ಪೌರಾಣಿಕ, ಹೆಣ್ಣು ಮಕ್ಕಳ, ಅಶ್ಲೀಲ, ಸಂಕೀರ್ಣ, ಎಂಬ ಶೀರ್ಷಿಕೆಗಳನ್ನು ಹೊಂದಿವೆ. ಇವುಗಳಡಿಯಲ್ಲಿ ಅನೇಕ ವೈವಿಧ್ಯಮಯ ಗಾದೆಗಳು ಕಂಡು ಬರುತ್ತವೆ. ಈ ಗಾದೆಗಳಿಗೆ ಯಾರ ಯಾವ ಬಗೆಯ ಹಂಗು ಯಾವತ್ತೂ ಇಲ್ಲ. ಏನು ಹೇಳಬೇಕು ಅದನ್ನು ಅವು ಹೇಳಿ ಮುಗಿಸುತ್ತವೆ. ಸ್ವಂತವಾಗಿ ಅನುಭವಿಸಿ ಗೊಂದಲಗಳೊಡನೆ ಬೇಸತ್ತ ಜನತೆಯು ಕೊನೆಗೆ ಕಂಡುಕೊಂಡ ನಿಜದ ಕಿಡಿಗಳಾಗಿ ಗಾದೆಗಳು ಕಂಡು ಬರುತ್ತವೆ.

ಕೃಷಿರಂಗ ವಿಭಾಗದಲ್ಲಿ ೧೭೩ ಗಾದೆಗಳು ಸಂಗ್ರಹಗೊಂಡಿವೆ. ನಮ್ಮದು ಕೃಷಿ ಪ್ರಧಾನವಾದ ದೇಶ ಕೃಷಿಕರು ಶತಶತಮಾನಗಳ ಅನುಭವದಿಂದ ಅನೇಕ ಗಾದೆಗಳನ್ನು ಸೃಷ್ಟಿಸಿದ್ದಾರೆ. ಮಳೆಯನ್ನು ಆಧರಿಸಿಯೇ ಸಾಕಷ್ಟು ಗಾದೆಗಳುಂಟು.

'ಆಕಾಶದ ಮಳೆ ಭೂಮಿಯಲ್ಲಿ ಬೆಳೆ'

'ಅರಗಳಿಗೆ ಬಂದರು ಸುರಿಮಳೆ ಬರಬೇಕು.'

'ಆದರ ಹಸ್ತಾ. ಆಗದಿದ್ದರೆ ರೈತ ಹಲ್ಲ ಕಿಸ್ತಾ.' [೩೬]

ದನ ಕರುಗಳು, ವಿವಿಧ ಬೆಳೆಗಳು, ರೈತನ ನಂಬುಗೆಗಳು, ಉಪಕಸುಬುಗಳನ್ನು ಕುರಿತು ಮಾಡಬೇಕಾದ ಅಧ್ಯಯನಕ್ಕೆ ಗಾದೆಗಳು ಸಹಾಯಕವಾಗಿವೆ. ಪ್ರತಿದಿನದ ಅನುಭವ ಹಾಗೂ ನಿರೀಕ್ಷಣೆಯಿಂದ ಹುಟ್ಟಿದ ಗಾದೆಗಳಲ್ಲಿ ಆಯಾ ಸಂದರ್ಭದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಗಾದೆಗಳು ರಚಿತವಾಗಿವೆ. ಅಂತಹ ೧೧೩ ಗಾದೆಗಳು ಡಾ. ಎಂ.ಎಸ್. ವಾಲಿಯವರಿಂದ ಅಚ್ಚುಕಟ್ಟಾಗಿ ಸಂಗ್ರಹಗೊಂಡಿವೆ.

'ಅಜ್ಞಾನಿ ಜೊತೆ ಅಧಿಕ ಸ್ನೇಹಿತಕ್ಕಿಂತ ಸುಜ್ಞಾನಿಯ ಜೊತೆ ಕಲಹಬೇಕು'

'ಅಟ್ಟಮೇಲೆ ಒಲೆ ಉರಿಯಿತು ಕೆಟ್ಟಮೇಲೆ ಬುದ್ಧಿ ಬಂತು'

'ಉದ್ದಿಮೆದಾರನಿಗೆ ಉದ್ದುರುಳುವಷ್ಟು ಪುರುಸೊತ್ತಿಲ್ಲ'

'ಮಾತುಬಲ್ಲವ ಮಾಣಿಕ ತಂದ. ಮಾತರಿಯದವ ಜಗಳ ತಂದ' [೩೭]

ದಡ್ಡತನ ವಿಭಾಗದಲ್ಲಿ ೨೬೯ ಗಾದೆಗಳು ಸಂಗ್ರಹಗೊಂಡಿವೆ.

'ಅಲ್ಪನಿಗೆ ಅಧಿಕಾರ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿದಂತೆ'

'ಇದ್ದಲಿಗೆ ಮಸಿ ಬುದ್ಧಿ ಹೇಳಿದಂತೆ'

' ಕತ್ತೆಯ ಬಾಲಕ್ಕೆ ಒನಕೆ ಕಟ್ಟಿದಂತೆ'

'ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ'

ಹೇನಿಗಂಜಿ ತಲೆ ಬೋಳಿಸಿಕೊಂಡರು. .[೩೮]

ಇಂತಹ ಕೆಲವು ಗಾದೆಗಳಿವೆ. ಇವು ಮನುಷ್ಯ ಸಂದರ್ಭಕ್ಕೆ ತಕ್ಕಂತೆ ನಡೆದುಕೊಳ್ಳುವ ಅರ್ಥವನ್ನು ಹೊಂದಿವೆ. ಇದೆ ರೀತಿ 'ಜಾತೀಯತೆ' ವಿಭಾಗದಲ್ಲಿ ಜಾತಿವೃತ್ತಿಗೆ ಸಂಬಂಧಿಸಿದಂತೆ ೫೧ ಗಾದೆಗಳಿವೆ. ಉದಾಹರಣೆಗೆ 'ವಿಜಾಪೂರದಾಗ ಇಜಾರದವರು ಹಜಾರು ಮಂದಿ'. ಎಂಬ ಗಾದೆಯಲ್ಲಿ ವಿಜಾಪೂರದಲ್ಲಿ ಇಜಾರದವರು ಹಜಾರು ಮಂದಿಯೆಂದರೆ ಇಲ್ಲಿ ಮುಸ್ಲಿಂ. ಆಳರಸ ಪ್ರಭಾವ. ಅವರ ದರ್ಬಾರದಲ್ಲಿ ಹಿಂದೂ ಮುಸ್ಲಿಂ ಎಲ್ಲರೂ ಇಜಾರ ಧರಿಸುತಿದ್ದರು ಎಂಬ ಸಂಗತಿ ಅದಕವಾದುದು ಕಂಡು ಬರುತ್ತದೆ. ಹಾಗೆಯೇ 'ತಿರುಪತಿ ಕ್ಷೌರಿಕ ತಲೆ ಬೋಳಿಸಿದಂತೆ' ಎಂಬ ಗಾದೆ ಪೂರ್ಣ ಕೆಲಸ ಮಾಡದಿರುವ ಸಂದರ್ಭದಲ್ಲಿ ಹುಟ್ಟಿಕೊಂಡಿದ್ದು. ತಿರುಪತಿಯಲ್ಲಿ ಮುಡಿ ಕೊಡಲುಬರುವ ಯಾತ್ರಿಕರ ಸಂಖ್ಯೆ ಹೆಚ್ಚು, ಕ್ಷೌರಿಕರಿಗೆ ಆಗ ಸುಗ್ಗಿ ಇದ್ದಂತೆ, ಎಲ್ಲರನ್ನು

೩೬. ಆಯ್ದ ಗಾದೆಗಳು ಡಾ ॥ ಎಂ.ಎಸ್. ವಾಲಿ ಪು.ಸಂ. ೧-೨ ಪ್ರಕಟಣೆ : ೨೦೦೫
೩೭. ಆಯ್ದ ಗಾದೆಗಳು ಡಾ ॥ ಎಂ.ಎಸ್. ವಾಲಿ ಪು.ಸಂ. ೭, ೯, ೧೦ ಪ್ರಕಟಣೆ · ೨೦೦೫
೩೮. ಆಯ್ದ ಗಾದೆಗಳು ಡಾ ॥ ಎಂ.ಎಸ್. ವಾಲಿ ಪು.ಸಂ. ೧೩, ೧೫, ೨೧ ಪ್ರಕಟಣೆ . ೨೦೦೫

ಒಂದೇ ಕಾಲಕ್ಕೆ ಬೋಳಿಸುವುದು ಅಸಾಧ್ಯ. ಬಿಟ್ಟರೆ ಗಿರಾಕಿಗಳು ಬೇರೆಡೆ ಹೋಗುವರು. ಆದಕ್ಕಾಗಿ ಪ್ರತಿಯೊಬ್ಬರ ತಲೆಯಿಂದ ಸ್ವಲ್ಪ ಕೂದಲು ತೆಗೆದುಕೊಂಡು ಕೂರಿಸುತ್ತಾರೆ. ಹೀಗೆ ಕೂದಲು ತೆಗೆದು ಗಿರಾಕಿಯನ್ನು ಬೇರೆ ಕ್ಷೌರಿಕರು ಮುಟ್ಟುವಂತಿಲ್ಲ. ಇದು ಕ್ಷೌರಿಕರ ಕಾನೂನು. ಹೀಗೆ ಕೂದಲು ಕಳೆದುಕೊಂಡು ಕುಳಿತ ಯಾತ್ರಿಕರ ಪಾಡು ತಿಮ್ಮಪ್ಪನಿಗೆ ಗೊತ್ತು ಎಂಬರ್ಥ. ಇಂತಹ ಹಲವಾರು ಗಾದೆಗಳು ಇಲ್ಲಿ ಸಂಗ್ರಹಗೊಂಡಿವೆ.

'ಊಟೋಪಚಾರ' ವಿಭಾಗದಲ್ಲಿ ಆಹಾರ, ಊಟ, ಉಪಚಾರಕ್ಕೆ ಸಂಬಂಧಿಸಿದಂತೆ ೨೦೪ ಗಾದೆಗಳು ಸಂಗ್ರಹಗೊಂಡಿವೆ. 'ಉಪ್ಪಿಲ್ಲದ ಊಟ ಮನವಿಲ್ಲದ ಕೂಟ'. 'ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಬಂಧುವಿಲ್ಲ'. 'ಉಂಡಮನೆ ಗಳ ಎಣಿಸಿದಂತ'. ಎಂಬ ಗಾದೆಗಳು ಊಟದ ಮಹತ್ವದ ಜೊತೆಗೆ ಅಷ್ಟೆ ಪ್ರಾಮುಖ್ಯತೆಯನ್ನು ತಾಯಿಗೆ ನೀಡಲಾಗಿದೆ. ಒಂದಕ್ಕೊಂದು ಸಾಮರಸ್ಯದ ಹೋಲಿಕೆಯನ್ನು ಕಾಣುತ್ತೇವೆ. ಊಟ ಮಾಡಿದ ಮನೆಯನ್ನು ಮರೆಯಬಾರದು ಹಾಗೆಯೇ ದ್ರೋಹ ಬಗೆಯಬಾರದು ಎಂಬ ಅರ್ಥವನ್ನು ಹೊಂದಿದೆ.. ಇಂತಹ ಗಾದೆಗಳು ಮನುಷ್ಯ ಜೀವನದ ಪ್ರತಿಕ್ಷಣಕ್ಕೂ ಅನ್ವಯಿಸುವಂತಹ ವಿಶಾಲವಾದ ಅರ್ಥವನ್ನು ಹೊಂದಿವೆ. 'ಹಾಸ್ಯರಸಕ್ಕೆ' ಸಂಬಂಧಿಸಿದಂತೆ ೧೫೦ ಗಾದೆಗಳಿವೆ.. ಉದಾ:

'ಆಷಾಢಗಾಳಿ ಬಿಸಿ ಬಿಸಿ ಹೊಡೆಯುವಾಗ ಹೇಸಿ ನನ್ನ ಜೀವ
ಹೆಂಗಸಾಗಿ ಯಾಕ ಹುಟ್ಟಲಿಲ್ಲ ಅಂದ' :

'ಅಸತ್ತು ಬ್ಯಾಸತ್ತು ಅಕ್ಕನ ಮನೆಗೆ ಹೋದರ ಅಕ್ಕನ ಗಂಡ ಬಿಕ್ ಎಂದ'

'ಮಕ್ಳೆ ಮಕ್ಳೆ ಮಂಚಕಸ್ನು ಕಾಲೆಂದರೆ ಮೂರು ಮತ್ತೊಂದು ಅಂದ್ನು'

ಇಂತಹ ಹಲವಾರು ಹಾಸ್ಯ ಚಿತ್ರಗಳು ಎದ್ದು ಕಾಣುವ ವಿಶೇಷತೆ ಈ ಹಾಸ್ಯದ ಗಾದೆಗಳಲ್ಲಿದೆ. ಕಾರಣ ಅಲ್ಲಿರುವ ಸಂಭಾಷಣೆ. ಅಂತು ಇಂತಹ ಅಭಿವ್ಯಕ್ತಿಯ ವಿಧಾನ ಯಾರಿಗೆ ಹಿಡಿಸುತ್ತದೆ. ಗಾದೆಗಳ ಆಕರ್ಷಕ ಮಾಟಕ್ಕೆ ಸರಳತೆ ಸೆರೆಹಿಡಿಯಬಲ್ಲ ಗುಣವಾದಂತೆ. ಅದರ ಹಾಸ್ಯ ಪ್ರವೃತ್ತಿ ನಕ್ಕು ನಗಿಸಬಲ್ಲ ವಿಶಿಷ್ಟತೆಯನ್ನು ಹೊಂದಿವೆ. ಹಾಸ್ಯಕ್ಕೆ ಜೋಡಿಯಾಗಿ ವಿಡಂಬನೆ ಮೊನಚನ್ನೂ, ಹರಿತವನ್ನೂ ತಂದು ಕೊಡುತ್ತದೆ. ಆದ್ದರಿಂದ ಗಾದೆಗಳಲ್ಲಿ ಹಾಸ್ಯ ಕೊನೆಗೆ ಹಾಸ್ಯವಾಗಿಯೇ ಉಳಿಯದೆ ಗಂಭೀರ ಜ್ಞಾನದ ಪಾದರಸವಾಗಿ ಉಳಿದು ಕೊಳ್ಳುತ್ತದೆ. ಆದ್ದರಿಂದ ಇಲ್ಲಿರುವ ಗಾದೆಗಳು ಹಾಸ್ಯದ ಮುಸುಕಿನಲ್ಲಿದ್ದರೂ ಜ್ಞಾನದ ಚೈತನ್ಯ ಅನುಭವದ ವರ್ಣಚಿತ್ರಗಳಾಗಿವೆ. ಐತಿಹಾಸಿಕ-ಪೌರಾಣಿಕ ವಿಷಯಗಳಿಗೂ ಸಂಬಂಧಿಸಿದ ೪೭ ಗಾದೆಗಳು ಇಲ್ಲಿವೆ.

'ಪಗಡೆಯಾಡಿ ಪಾಂಡವರು ಕೆಟ್ಟರು. ಕವಡೆಯಾಡಿ ಹೆಂಗಸರು ಕೆಟ್ಟರು'.

'ಗಂಗಾ ಸ್ನಾನ ತುಂಗಾ ಪಾನ'

---

'ವೇಷದಿಂದ ಇಂದ್ರ ಕೆಟ್ಟ, ದ್ವೇಷದಿಂದ ಕೌರವ ಕೆಟ್ಟ'.

ಇಲ್ಲಿ ಭಾಷೆ ಭಾದೆಯಾಗದೆ ಧ್ವನಿಯನ್ನು ಅವಲಂಬಿಸಿದುದು ಕಂಡು ಬರುತ್ತದೆ. ಭಾವ ಪ್ರತಿಮಾ ರೂಪವನ್ನು ಪ್ರಜ್ವಲಿಸಿದೆ. ಇತಿಹಾಸ, ಐತಿಹ್ಯ, ಸ್ಥಳ ಪುರಾಣ ಮುಂತಾದ ಘಟನಾ ವಿಶೇಷಗಳನ್ನು ಚೆನ್ನಾಗಿ ಬಳಸಿಕೊಳ್ಳುವುದರ ಮೂಲಕ ಭಾಷಾ ಶೈಲಿ ಹೊಸ ವರ್ಚಸ್ಸನ್ನು ಪಡೆದುಕೊಂಡಿದೆ.

ಎಂಟನೆಯ ವಿಭಾಗದಲ್ಲಿ ಹೆಣ್ಣು ಮಕ್ಕಳಿಗೆ ಸಂಬಂಧಿಸಿದ ಗಾದೆಗಳು ಸಂಗ್ರಹಗೊಂಡಿವೆ. ೩೧ ಗಾದೆಗಳು ಇಲ್ಲಿವೆ. ನಮ್ಮ ಜಾನಪದರು ಹೆಣ್ಣನ್ನು ತಾಯಾಗಿ, ಹೆಂಡತಿಯಾಗಿ, ಸೊಸೆಯಾಗಿ ಹೀಗೆ ಹಲವಾರೂ ವಿಧದಲ್ಲಿ ಕಂಡಿದ್ದಾರೆ.

'ಅತ್ತೆ ಎಂದರೆ ಮಾಗಿದ ಸೊಸೆ, ಸೊಸೆ ಎಂದರೆ ಮೊಳಕೆಯಂತಾ ಅತ್ತೆ'

'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ'

'ಅತ್ತೆಯಿಲ್ಲದ ಆಚಾರಗಿತ್ತಿ ಸೊಸೆಯಿಲ್ಲದ ಪಾತರಗಿತ್ತಿ"

ಹೀಗೆ ನೂರಾರೂ ಸ್ತರಗಳ ಚಿತ್ರಗಳು ಲಭಿಸುತ್ತವೆ. ಇವರಿಬ್ಬರ ಕಾದಾಟವನ್ನು ಹಲವಾರು ಗಾದೆಗಳ ಮುಖಾಂತರ ಗುರುತಿಸಬಹುದಾಗಿದೆ. ಪ್ರಿಯವಾಗಿ ಸೊಸೆಯನ್ನು ನೋಡಿಕೊಂಡ ಅತ್ತೆ ಸಿಗುವುದು ಬಹಳ ವಿರಳ. ಅಂತಹ ಅತ್ತೆಯ ಕಾಠಿಣ್ಯತೆಯನ್ನು ಗಾದೆಗಳು ಹಲವಾರು ರೀತಿಯಲ್ಲಿ ಚಿತ್ರಿಸುತ್ತವೆ. ಆದರೆ ಅವಳ ಕಲ್ಲಿನಂಥ ಎದೆಯು ಕರಗುವ ಪ್ರಸಂಗ ಬರದೆ ಇಲ್ಲ. ಅದನ್ನು 'ಸೊಸೆ ಸತ್ತಮೇಲೆ ಅತ್ತೆಯೂ ಅತ್ತಳಂತೆ' ಎಂಬುದು ತಂದು ಕೊಡುತ್ತದೆ. ಅತ್ತೆ ಸೊಸೆಗಾಗಿ ಅತ್ತಳೋ ಅಥವಾ ತನಗೆ ಕಷ್ಟ ಬಂತಲ್ಲ ಎಂದು ಅತ್ತಳೋ ಹೇಳುವುದು ಕಷ್ಟ. ಅಂತೂ ಅವಳು ಅತ್ತದ್ದು ಅವಳಿಗೂ ಮಾನವೀಯತೆ ಇದ್ದೇ ಇರುತ್ತದೆ ಎಂಬುದನ್ನು ಸಮರ್ಥಿಸುತ್ತದೆ. ಹೆಣ್ಣನ್ನು ಕುರಿತು ಇಲ್ಲಿ ಹಲವು ಗಾದೆಗಳು ಕಂಡು ಬಂದರೂ ಆಕೆಯನ್ನು ಸಹಾನುಭೂತಿಯಿಂದ ನೋಡಲಾಗಿರುವುದು ಕಾಣುತ್ತದೆ. ಹೆಣ್ಣಿನ ಬಗ್ಗೆ ಆಕ್ಷೇಪಣೆಗಳ ಪಟ್ಟಿಯೇ ಜಾಸ್ತಿಯಾಗಿರುವಂತೆ ಕಂಡು ಬಂದು ಅವಳನ್ನು ಅನುಕಂಪದಿಂದ ಆತ್ಮೀಯತೆಯಿಂದ ಪರಿಭಾವಿಸಲಾಗಿರುವುದು ಸೋಜಿಗದ ಸಂಗತಿಯಾಗಿದೆ. ಅವಳ ಮೂರ್ತಿಮತ್ತಾದ ಪೂರ್ಣ ವ್ಯಕ್ತಿತ್ವ ಗಾದೆಗಳಲ್ಲಿ ಸಿಗುವುದು ಬಹಳ ಅಪರೂಪ. ಆದರೂ ಕೆಲವು ಗಾದೆಗಳಲ್ಲಿ ಕರುಣೆಯ ಸುಂದರ ಚಿತ್ರ ವಿರಳವಾಗಿಯಾದರೂ ಸಿಗುವುದು ಸಮಾಧಾನಕರವಾಗಿದೆ. ಅಂತಹ ಕೆಲವು ಉದ್ಧರಿಸಲು ಯೋಗ್ಯವಾದ ಗಾದೆಗಳು ಇಲ್ಲಿ ಕಂಡು ಬರುತ್ತವೆ.

'ಅಶ್ಲೀಲ' ವಿಭಾಗದಲ್ಲಿ ೧೨೮ ಗಾದೆಗಳು ಕಂಡು ಬರುತ್ತವೆ. ಮೇಲ್ನೋಟಕ್ಕೆ ಅಶ್ಲೀಲ ಎನಿಸಿದರೂ ಒಳಾರ್ಥ ಬಹಳ ಕಠೋರವಾಗಿದ್ದರೂ ಸತ್ಯವಾಗಿರುತ್ತದೆ.

---

ಉದಾ: 'ಮಾತು ಮನೆ ಕೆಡಸ್ತು, ತೂತು ಒಲೆ ಕೆಡಸ್ತು', ಮಾತು ಮನೆ ಕೆಡಸ್ತು ಸೂಳೆ ನೆರೆ ಕೆಡಿಸಿದಳು'. 'ಸಂಗದಂತೆ ಬುದ್ಧಿ, ಅನ್ನದಂತೆ ಲದ್ದಿ'. 'ಹುಡುಗ ಗಂಡ ಅಲ್ಲ, ಹುಲ್ಲು ಬೆಂಕಿ ಅಲ್ಲ'. 'ಹೆಂಗಸರ ಬಾಯಲ್ಲಿ ಮಾತು ನಿಲ್ಲದು. ಗಂಡಸರ ಬಗಲಲ್ಲಿ ಕೂಸು ನಿಲ್ಲದು' ಇಂತಹ ಹಲವಾರು ಗಾದೆಗಳು ಇಲ್ಲಿ ಸಂಗ್ರಹಗೊಂಡಿವೆ.

ಸಂಕೀರ್ಣ ಶೀರ್ಷಿಕೆಯಡಿಯಲ್ಲಿ ೨೭೯ ಗಾದೆಗಳು ಸಮಾವೇಶಗೊಂಡಿವೆ. ನಮ್ಮ ವಿಶಾಲ ಬದುಕಿನ ಸಂಕೀರ್ಣ ಸ್ಥಿತಿಯಲ್ಲಿ ಈ ಗಾದೆಗಳಲ್ಲಿ ಕಂಡು ಬರುತ್ತವೆ. ಆಶ್ಚರ್ಯಕರವಾದ ಗಾದೆಗಳು ಇಲ್ಲಿ ದಾಖಲಾಗಿವೆ. ಈ ಗಾದೆಗಳು ಜನಸಾಮಾನ್ಯರ ನಿಸ್ಪಷ್ಟ ತಿಳುವಳಿಕೆಯ ಅಪಾರ ಸತ್ವದ ಸೂಕ್ತಿಗಳಾಗಿವೆ. ಇವುಗಳಲ್ಲಿ ವ್ಯಕ್ತವಾಗುವ ಅವರ ಅಪಾರ ಅನುಭವದ ವಿಶ್ವರೂಪದ ಚಿಕ್ಕ ಚಿಕ್ಕ ವಾಕ್ಯದ ಈ ಚೊಕ್ಕ ಬಂಗಾರ ಬದುಕಿನ ಮಾರ್ಗದರ್ಶಕ; ಜ್ಞಾನದ ಅನಂತ ಆಕಾಶವನ್ನೇ ನಿಂತಲ್ಲಿಯೇ ನೋಡಬಲ್ಲ ರೀತಿ ನಿರ್ಣಯಗಳ ದೂರದರ್ಶಕ. 'ಗಾದೆ ಮಾತು ಚಂದ ಸಂತರ ನುಡಿ ಚಂದ'. 'ಗಾದೆ ವೇದದ ಮಾತು, ಶಾಸ್ತ್ರ ಸಂತೆಯ ಗುಲ್ಲು'. 'ಗಾದೆ ವೇದಕ್ಕೆ ಸಮಾನ'. 'ವೇದ ಸುಳ್ಳಾದರು ಗಾದೆ ಸುಳ್ಳಲ್ಲ' ಮೊದಲಾದ ಗಾದೆಗಳನ್ನು ಕುರಿತು ಗಾದೆಗಳೇ ಇದನ್ನು ಧೃಢಪಡಿಸುತ್ತವೆ. ವೇದ ಜನಸಾಮಾನ್ಯರಿಗೆ ನಿಲುಕದ, ಕೆಲವರಿಗೆ ಮಾತ್ರ ಮೀಸಲಾದ ಸ್ವತ್ತಾಗಿತ್ತು. ಆದರೆ ಜನ ಸಾಮಾನ್ಯರ ಬದುಕಿನಲ್ಲಿ ಇಂಥ ವೇದದ ಸ್ಥಾನವನ್ನು ಗಾದೆಯೊಂದು ಆಕ್ರಮಿಸಿಕೊಂಡಿತು. ವೇದ ಕೆಲವರಿಗೆ ಮಾತ್ರವಾದರೆ, ಗಾದೆ ಹಲವರ ಧ್ವನಿಯಾಗಿದೆ. ಆದ್ದರಿಂದ ಗಾದೆ ವೇದಕ್ಕಿಂತ ಉಚಿತವಾದುದಾಗಿದೆ. ಜನಪದ ಆಸಕ್ತರಿಗೆ ಭಯವೆಂದೆನಿಸುತ್ತದೆ. ಹಾಗಾಗುವ ಮುನ್ನ ಅವುಗಳನ್ನು ಸಂಗ್ರಹಿಸಬೇಕು. ಹೀಗೆ ಸಂಗ್ರಹಿಸಿದವುಗಳನ್ನು ವಿಶ್ಲೇಷಿಸಿ ವಿವೇಚಿಸಿ ಸಂರಕ್ಷಿಸಬೇಕು. ಈ ನಿಟ್ಟಿನಲ್ಲಿ ಡಾ॥ ಎಂ.ಎಸ್ ಪಾಲಿಯವರು ಹಲವು ವರುಷಗಳ ಜಾನಪದ ಸಂಬಂಧವಾದ ಇಂತಹ ಕೆಲಸದ ಕಡೆಗೆ ಅದ್ವ ಗಮನವನ್ನು ಕೊಟ್ಟು ಶ್ಲಾಘನೀಯ ಕಾರ್ಯ ಕೈಗೊಂಡಿದ್ದಾರೆ.

**"ಸಾವಿರದ ಜನಪದ ಗೀತೆಗಳು" :**

ಎಂ. ಎಸ್ ಪಾಲಿಯವರ ಮತ್ತೊಂದು ಸಂಪಾದಿತ ಕೃತಿ "ಸಾವಿರದ ಜನಪದ ಗೀತೆಗಳು" ಇದು ತಮ್ಮದೇಯಾದ ಭುವನೇಶ್ವರಿ ಪ್ರಕಾಶನ (ಬಿಜಾಪೂರ)ದ ವತಿಯಿಂದ ಪ್ರಕಟಗೊಂಡಿದೆ. ಆಕರ್ಷಕ ಮುಖ ಪುಟ ವಿನ್ಯಾಸದೊಂದಿಗೆ ಮುದ್ರಣ ಅಚ್ಚುಕಟ್ಟಾಗಿದೆ. ಈ ಕೃತಿಗೆ ಸಂಪಾದಕರೇ ಸವಿವರವಾದ ಪ್ರಸ್ತಾವನೆ ಬರೆದಿರುವರು. ವಿನಾಯಕ ಸ್ತುತಿಯಿಂದ ಪ್ರಾರಂಭಗೊಂಡು 'ಮಂಗಳಾರತಿ'ಯೊಂದಿಗೆ ಮುಕ್ತಾಯಗೊಂಡುದುದು ಜನಪದೀಯ

ಸಂಪ್ರದಾಯವನ್ನನುಸರಿಸಿದೆ. ಒಟ್ಟು ೫೧ ಜನಪದ ಹಾಡುಗಳು ಸಂಗ್ರಹಗೊಂಡಿವೆ. ಜನಮನದಲ್ಲಿ ಯಾವತ್ತು ಅಚ್ಚೊತ್ತಿ ನಿಲ್ಲಬಲ್ಲ ಹಾಡುಗಳ ಸಂಕಲನ ಇದಾಗಿದೆ.

ಪ್ರಸ್ತಾವನೆಯಲ್ಲಿ ಸಂಪಾದಕರೇ ಹೇಳಿರುವಂತೆ ಗರತಿಯ ಹಾಡು ಸಂಪ್ರದಾಯದ ಹಾಡು, ಸಂಪ್ರದಾಯದ ಹಾಡು, ಹರತಿಯ-ಹೋಳಿಯ ಹಾಡು, ಮತ್ತಿತರ ಜನಪದ ಹಾಡುಗಳಲ್ಲಿ ಜೀವನ ಮೌಲ್ಯವಿದೆ. ಅವು ಜೀವನದ ಪ್ರತಿಬಿಂಬದಂತಿವೆ. ಸಮಾಜದಲ್ಲಿ ಹೇಗೆ ಬದುಕಬೇಕೆಂಬುದನ್ನು ಕಲಿಸಿ ಕೊಡುತ್ತವೆ. ಆದರೆ ಇಂದಿನ ಜನಾಂಗದಲ್ಲಿ ಟ್ರ್ಯಾಕ್ಟರುಗಳಲ್ಲಿ ಅಶ್ಲೀಲ ಜನಪದ ಹಾಡುಗಳನ್ನು ರಚಿಸಿ ಕ್ಯಾಸೆಟ್ಟು ಮೂಲಕ ಪ್ರಸಾರ ಮಾಡುತ್ತಿರುವುದು ನಮ್ಮ ಸಂಸ್ಕೃತಿಗೆ ವಿರುದ್ಧವಾದುದು. ಆದರಿಂದ ಬೇಸರಿಸಿದ ಸಂಪಾದಕರು ಅಂದು ಇಂದು ಎಂದೆಂದೂ ಗುಣುಗುಣಿಸುತ್ತಲಿರುವ ಜನಪದ ಹಾಡುಗಳನ್ನು ಕಲೆ ಹಾಕಿ ಕನ್ನಡ ಜನತೆಗೆ ಕೈಗಿತ್ತುದು ಸ್ವಾಗತಾರ್ಹ. ಅವು ಪ್ರಮುಖವಾಗಿ ಇಂತಿವೆ.

ಕರ್ನಾಟಕ ಸಂಪ್ರದಾಯದಂತೆ ಗಣಪತಿಯ ಮತ್ತು ಸಿದ್ಧರಾಮೇಶ್ವರರ ಸ್ತೋತ್ರದೊಂದಿಗೆ ಪ್ರಾರಂಭವಾಗಿದ್ದು ಇದನ್ನು ವೀರಣ್ಣ ದಂಡೆಯವರ 'ಮಲ್ಲಿಗೆಯ ದಂಡೆ'ಯಿಂದ ಸ್ವೀಕರಿಸಿದ್ದಾರೆ. 'ಫಲ್ಗು ಫಲ್ಗೇಣಿತ', ರಂಗನಾಥ ನೆನೆಯುವ ಪರಿ ಈ ಕವಿತೆಯಲ್ಲಿ ಅನಾವರಣಗೊಳ್ಳುತ್ತದೆ. 'ಚೆಲ್ಲಿದರು ಮಲ್ಲಿಗೆಯ' ಇದೊಂದು ಜನಪ್ರಿಯ ಹಾಡಾಗಿದೆ. ದೂರದರ್ಶನದಲ್ಲಿ, ರೇಡಿಯೋದಲ್ಲಿ ಮತ್ತಿತರ ವೇದಿಕೆಗಳಲ್ಲಿ ಇದನ್ನು ಪದೇ ಪದೇ ಜನಪದ ಕಲಾವಿದರು ಹಾಡುತ್ತಾ ಬಂದಿರುವರು. ಮಹಾದೇವನನ್ನು ನೆನೆಯುವ ಸುಂದರ ಹಾಡು ಇದಾಗಿದೆ. 'ಎಳುಕೊಳ್ಳದ ಯಲ್ಲಮ್ಮ ನಿನ್ನ ನೆನೆಯದ ಜನರಿಲ್ಲ' ರೇಣುಕಾ ದೇವಿಯ ಚರಿತ್ರೆಯನ್ನು ಚಿತ್ರಿಸುವ ಸುಂದರ ಜನಪದ ಗೀತೆಯಾಗಿದೆ. ಮಳೆರಾಯನ ಕರೆ ರೈತನ ಜೀವನದಲ್ಲಿ ಹಾಸುಹೊಕ್ಕಾಗಿದೆ. ಮಳೆ ಆದರೇನೇ ಬೆಳೆ. ಮಳೆ ಬಾರದಿದ್ದಾಗ ರೈತ ಮಳೆಯ ಹಾಡಿನಲ್ಲಿ ತನ್ನ ಅಳಲನ್ನು ತೋಡಿಕೊಂಡ ಕಥೆ ಇದರಲ್ಲಿ ಚಿತ್ರಗೊಂಡಿದೆ. ಮಳೆರಾಯ ಬಾರದಿದ್ದಕ್ಕೆ ತಮಗಿದ್ದ ಮಕ್ಕಳನ್ನು ಮಾರಿ ಬದುಕು ಸಾಗಿಸಿದ ಕಥೆ ಈ ಕವಿತೆಯಲ್ಲಿ ಹೆಪ್ಪುಗಟ್ಟಿದೆ. ದುಃಖ ಉಮ್ಮಳಿಸಿ ಬರುವಂತಿದೆ. ಉದಾಹರಣೆಗಾಗಿ:

"ಒಕ್ಕಲಗೇರ್ಯಾಗ ಮಳೆರಾಜ । ಅವರು ।
ಮಕ್ಕಳ ಮಾರ್‍ಯಾರ ಮಳಿರಾಜಾ ।
ಮಕ್ಕಳ ಮಾರಿ ರೊಕ್ಕಾ ಹಿಡಕೊಂಡು
ಛತ್ತರಿತ ತಿರುಗ್ಯಾರು ಮಳಿರಾಜ ॥ [೩೯]

೩೯. ಸಾವಿರದ ಜನಪದ ಗೀತೆಗಳು: ಸಂಪಾದಕರು: ಡಾ॥ ಬಿ ಎಸ್ ವಾಲಿ ಪುಟ ಸಂಖ್ಯೆ ೬ ಪ್ರ. ವರ್ಷ ೨೦೦೦

ಹಸಿವು ಏನೇನು ಮಾಡಿಸುತ್ತದೆಂಬುದಕ್ಕೆ ಈ ಜನಪದ ಗೀತೆ ನಿದರ್ಶನ. ಇಂಥ ಹಾಡುಗಳಿಗೆ ಸಾವು ಎಂಬುವುದಿಲ್ಲ. ಅದಕ್ಕಾಗಿ ಈ ಸಂಕಲಕ್ಕೆ ಸಾವು ಇರದ ಹಾಡುಗಳು ಎಂದು ಕರೆದದ್ದು ಅರ್ಥಪೂರ್ಣವಾಗಿದೆ. ಹೊಸ ಹೊಲದಲ್ಲಿ ಬಸವಣ್ಣನ ಅಂದರೆ ಎತ್ತುಗಳ ಬಲವೊಂದಿದ್ದರೆ ಬೇಕಾದಷ್ಟು ಹೊಲಿ ಮಾಡಬೇಕೆಂಬುದರ ಪ್ರಸ್ತಾಪವಿದೆ. ಹಳ್ಳದ ಹೋಲದಾಗ ಮತ್ತು ಹಂತಿಯ ಹಾಡುಗಳಲ್ಲಿ ಎತ್ತುಗಳ ವರ್ಣನೆ. ಸ್ತುತಿ ಬರುತ್ತದೆ. ಡೊಳ್ಳಿನ ಹಾಡಿನಲ್ಲಿಯೂ ಆಧ್ಯಾತ್ಮಿಕ ಕೃಷಿ. ಒಕ್ಕಲುತನ ಕಾಯಕದ ಮಹಿಮೆ. ಆಧ್ಯಾತ್ಮದ ಸೊಗಸಿನ ಭಕ್ತಿಯಲ್ಲಿ ಚಿತ್ರಿತಗೊಳ್ಳುತ್ತದೆ. ಇದೊಂದು ತತ್ವಪದ - ಅಲ್ಲಮ ಪ್ರಭುವಿನ 'ತನುವ ತೋಂಟವ ಮಾಡಿ ಮನವ ಗುದ್ದಲಿಯ ಮಾಡಿ ಅಗೆದು ಕಳೆದನಯ್ಯಾ ಭ್ರಾಂತಿಯ ಬೇರು' ಎಂಬುದರ ಹೋಲಿಕೆಯಂತಿದೆ. ಜೋಗುಳ ಪದ ಲಾಲಿಯ ಪದಗಳು ಬಂದು ಮಾಯವಾಗುತ್ತಲಿವೆ. ಇವು ಗರತಿಯರ ಹಾಡುಗಳಲ್ಲಿ ತ್ರಿಪದಿಯಲ್ಲಿದ್ದರೆ. ಇಲ್ಲಿ ಜೋಗುಳ ಪದ ಚೌಪದಿಯಲ್ಲಿದೆ. ಮಕ್ಕಳ ಜೋಗುಳ ಪದ ಹಾಡಿ ಮಲಗಿಸುವ, ಜೋಕಾಲಿ ತೂಗುವ, ಅದಕ್ಕೆ ಗೆಜ್ಜೆ ಕಟ್ಟುವುದು ಈ ನಿನಾದದಲ್ಲಿಯೇ ಮಲಗಿ ನಿದ್ರಿಸುವ ಕಂದ ತಾಯಿಂದಿಗೆ ಖುಷಿ ತರುವ ಸಂಗತಿ ಲಾಲಿಯ ಹಾಡಿನಲ್ಲಿದೆ. ೪೨ ನೆಯ ಕವಿತೆ ಡೊಳ್ಳಿನ ಹಾಡಿನಲ್ಲಿ ಆಧ್ಯಾತ್ಮದ ಅರಮನೆಯೇ ರಚನೆಗೊಂಡಿದೆ.

ಫಲ್ಲ ಫಲ್ಲೇಸುತ. ಚೆಲ್ಲಿದರು ಮಲ್ಲಿಗೆಯ. ಹಂತಿಯ ಹಾಡು. ಜೋಗುಳ ಹಾಡು. ಲಾಲಿಯ ಹಾಡು. ಮಗಳಿಗೆ ತಾಯಿಯ ಬುದ್ಧಿವಾದ. ಅಕ್ಕ-ತಂಗಿಯರ ಪ್ರೀತಿ. ನಿಂಬಿಯ ಬನದ ಮ್ಯಾಗಿನ. ಹೆಣ್ಣಿನ ಜುಮುಕಿ. ಭಾಗ್ಯದ ಬಳೆಗಾರ. ಮಗುವಿನ ಹಟ. ಚತುರ ನೀತಿ. ಜೋಕುಮಾರನ ಹಾಡು. ಚೆನ್ನಪ್ಪ ಚೆನ್ನಗೌಡ ಇವೆಲ್ಲವುಗಳು ಡಾ॥ ಬಿ ಎಸ್ ಗದ್ದಿಗಿಮಠರ 'ಗರತಿಯರ ಹಾಡುಗಳು" ಎಂಬ ಕೃತಿಗಳಲ್ಲಿ ಪ್ರಕಟಗೊಂಡಿವೆ. ಆದರೂ ಒಂದು ವ್ಯವಸ್ಥಿತ ರೀತಿಯಲ್ಲಿ ಸಂಗ್ರಹ ಮಾಡಿ ಸಂಪಾದನೆ ಮಾಡಿದ್ದುದು ಸ್ವಾಗತಾರ್ಹ. ಇವುಗಳ ಕುರಿತು ಹೇಳುವುದು ಅಪ್ರಸ್ತುತವೆನಿಸುತ್ತದೆ. ಉಳಿದೆಲ್ಲ ಗೀತೆಗಳು ಈ ಸಂಕಲನಕ್ಕೆ ಮೆರಗು ತಂದಿವೆಯೆಂದೇ ಹೇಳಬೇಕಾಗುತ್ತದೆ.

ಒಟ್ಟಿನಲ್ಲಿ ಸಂಪಾದನ ಕಾರ್ಯ ವಾಲಿಯವರಿಂದ ಅಚ್ಚುಕಟ್ಟಾಗಿದೆ ಎನ್ನುವುದಕ್ಕೆ ಈ ಕೃತಿಯು ಸ್ವಾರಸ್ಯಪೂರ್ಣ ಶೀರ್ಷಿಕೆಯಿಂದೊಡಗೂಡಿ ಮೆರಗು ತಂದಿದೆ. ಸಾಹಿತ್ಯ ಲೋಕಕ್ಕೆ ಕಳೆಕಟ್ಟಿದೆ. ಈ ಸಂಪಾದನಾ ಗ್ರಂಥವು ನಾಡಿನ ಜನತೆಗೆ ಸಂತಸ ಉಕ್ಕಿಸುವುದರಲ್ಲಿ ಸಂದೇಹವಿಲ್ಲ.

# ಅಧ್ಯಾಯ: ನಾಲ್ಕು

## ಡಾ. ಎಂ. ಎಸ್. ವಾಲಿಯವರ ಇತರ ಜಾನಪದ ಸಂಶೋಧನೆ

ಇಂಡಿ ತಾಲೂಕಿನ ಸಾಲೋಟಗಿಯವರಾದ ಡಾ: ಎಂ.ಎಸ್. ವಾಲಿಯವರು ಬಾಲ್ಯಕಾಲದಿಂದಲೂ ಚಡಚಣ, ಹಲಸಂಗಿ ಕಡೆಗಳಿಂದ ಬೀಸಿದ ಗಾಳಿಯನ್ನುಂಡು ಬಾಳಿ ಬೆಳೆದು ಬಂದವರಾಗಿದ್ದಾರೆ. ಜಾನಪದವನ್ನು ಒಲಿಸಿಕೊಂಡು ವಿಶೇಷ ಅಧ್ಯಯನ ಮಾಡಿ ಬಲಿದು ಬಲ್ಲವರಾಗಿದ್ದಾರೆ. ಜಾನಪದಕ್ಕೆ ವಾಲಿದವರಾಗಿದ್ದಾರೆ. ಜನಪದ ಸಾಹಿತ್ಯ ಪ್ರೇಮಿಗಳಾಗಿ ಸಾಕಷ್ಟು ವರ್ಷಗಳಿಂದ ಕಾರ್ಯ ಕೈಗೊಳ್ಳುತ್ತಾ ಬಂದಿದ್ದಾರೆ. ಸಂಪಾದನೆಯ ಜೊತೆ ಜೊತೆಗೆ ಸಾಕಷ್ಟು ಸ್ವರಚಿತ ಕೃತಿಗಳು ಹುಟ್ಟಿಕೊಂಡಿವೆ. ಮೊದಮೊದಲು ಉಪನ್ಯಾಸಗಳನ್ನು ನೀಡುವುದರ ಜೊತೆಗೆ ಲೇಖನಗಳನ್ನು ಬರೆಯುತ್ತ, ಪತ್ರಿಕೆಗಳಲ್ಲಿ ಪ್ರಕಟಿಸುತ್ತಾ ಸಾಹಿತ್ಯ ಕೃಷಿ ಮುನ್ನಡೆಯಿತು. ಆಳವಾದ ಪಾಂಡಿತ್ಯದ ಆಗರದಿಂದಲೇ ಲೇಖನಗಳು ಪ್ರಕಟಗೊಳ್ಳುತ್ತಿದ್ದವು. ಅವೆಲ್ಲವುಗಳನ್ನು ಒತ್ತಟ್ಟಿಗೆ ಸೇರಿಸಿ ಕೆಲವು ಕೃತಿಗಳ ರೂಪದಲ್ಲಿ ಹೊರತಂದರು. ಉದಾ: "ಜಾನಪದ ಜೀವಾಳ," 'ಲೇಖನ ಸಂಪದ', ಮುಂತಾದ ಕೆಲವು ಕೃತಿಗಳು. ಪ್ರಸ್ತುತ ಅಧ್ಯಾಯದಲ್ಲಿ ಲೇಖನಗಳ ಸಂಕಲನಗಳ ಜೊತೆಗೆ "ಕೃಷಿ ಜಾನಪದ"ದ ಕುರಿತು ಸಮಗ್ರ ಸಮೀಕ್ಷೆ ಮಾಡಲಾಗಿದೆ. ಈ ಕೃತಿಗಳಲ್ಲಿ ಕಂಡುಬರುವ ಲೇಖನ, ವಿಷಯಗಳೆಲ್ಲ ಜಾನಪದೀಯ ಸ್ಥಿತಿಯಿಂದಲೇ ರೂಪಗೊಂಡಿವೆ. ಇಲ್ಲಿ ಕಂಡು ಬರುವ ವಿಚಾರಗಳು ಜನಪದರ ಸಂಸ್ಕೃತಿ, ಆಚಾರ, ವಿಚಾರ, ಕರಕುಶಲತೆ, ಜೀವನ ಮೌಲ್ಯಗಳು, ಸಂಪ್ರದಾಯಿಕತೆ, ಐತಿಹಾಸಿಕತೆ ಹೀಗೆ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಮರುಚಿಂತನೆ ಮಾಡಲು ಅವಕಾಶ ಒದಗಿಸಿದವುಗಳಾಗಿವೆ.

### **"ಜಾನಪದ ಜೀವಾಳ".**

ಪ್ರಸ್ತುತ ಕೃತಿ 'ಜಾನಪದ ಜೀವಾಳ'ವು ೧೯೮೫ ರಿಂದ ಕೆಲವು ಸಂಚಿಕೆಗಳಿಗೆ ಡಾ: ಎಂ.ಎಸ್. ವಾಲಿಯವರು ಬರೆದು ಪ್ರಕಟಿಸಿರುವ ಹನ್ನೊಂದು ಲೇಖನಗಳ ಸಂಕಲನವಾಗಿದೆ. ಇಲ್ಲಿಯ ಹನ್ನೊಂದು ಲೇಖನಗಳಲ್ಲಿ ಕೊನೆಯ ಲೇಖನವನ್ನುಳಿದು ಇತರ ಲೇಖನಗಳು ನಾಡಿನ ಹೆಸರಾಂತ ಪತ್ರಿಕೆಗಳಲ್ಲಿಯೂ, ಸಂಚಿಕೆಗಳಲ್ಲಿಯೂ ಪ್ರಕಟವಾಗಿ ಜನಮನವನ್ನು ಸೂರೆಗೊಂಡಿವೆ. ಇವೆಲ್ಲ ಲೇಖನಗಳು ಗ್ರಂಥ ರೂಪದಲ್ಲಿ ಒಟ್ಟಾಗಿ ಪ್ರಕಟವಾದರೆ ಓದುಗರಿಗೆ ಅನುಕೂಲವಾಗುವದೆಂದು ಅನೇಕ ಹಿತೈಷಿಗಳು ಒತ್ತಾಯಿಸಿದ್ದರ ಫಲವಾಗಿ ಈ ಕೃತಿ ರಚನೆಯಾಯಿತು.

'ಜಾನಪದ ಜೀವಾಳ' ಕೃತಿಯ ಲೇಖನಗಳ ಕುರಿತು.

**'ಜನಪದ ಕರಕುಶಲ ಕಲೆಗಳು' :**

೧೯೮೫ ರ ಮಾರ್ಚ ೧೨,೧೩,೧೪ ರಂದು ಜರುಗಿದ ವಿಜಾಪುರ ಜಿಲ್ಲಾಮಟ್ಟದ ಕಲಾಮೇಳದಲ್ಲಿ ಪ್ರಸ್ತುತಪಡಿಸಿದ ಪ್ರಬಂಧವಿದು. ಈ ಲೇಖನವು ಮೊದಲಿಗೆ 'ವಿಜಾಪುರ ಜಿಲ್ಲೆಯ ಜಾನಪದ ದರ್ಶನ' ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಯಿತು.ಅನಂತರ ಜಾನಪದ ಜಗತ್ತು ಸಂಪುಟ ೬ ಸಂಚಿಕೆ ೫-೬ ರಲ್ಲಿ ಪುನರ್ ಮುದ್ರಣಗೊಂಡಿತು.

ಜನಪದರು ತಮ್ಮ ಸಾಂಸ್ಕೃತಿಕ ಜೀವನದ ಜೊತೆಗೆ ಜೀವನೋಪಯೋಗಿಯಾದ ಅನೇಕ ಸಾಧನ ಸಾಮಗ್ರಿಗಳನ್ನು ರೂಪಿಸಿಕೊಂಡಿದ್ದಾರೆ. ಕಲ್ಲು, ಮಣ್ಣು, ಲೋಹ, ಕಟ್ಟಿಗೆ ಮೊದಲಾದವುಗಳಿಂದ ಹಲವು ಬಗೆಯ ಉಪಕರಣಗಳನ್ನು ತಯಾರಿಸುವಾಗ ಉಪಯುಕ್ತತೆಯೊಡನೆ ಕಲಾತ್ಮಕತೆಯು ಮೇಳವಿಸಿದುದು ಕಂಡು ಬರುತ್ತದೆ. ಹೀಗೆ ಹಳ್ಳಿಯಲ್ಲಿ ಕಂಡುಬರುವ ಯಾವುದೇ ರೀತಿಯ ಸಾಧನ, ಸಲಕರಣೆಗಳನ್ನು ಗಮನಿಸಿದರೆ, ಅಲ್ಲಿ ಅವರ ಕಲಾಪ್ರತಿಭೆ ಕಾಣಿಸುತ್ತದೆ. ಜನಪದರ ಕರಕುಶಲ ಕಲೆಗಳು ನಾಡಿನ ಸಂಸ್ಕೃತಿಯ ಒಳಪದರುಗಳನ್ನು ಎಳೆಎಳೆಯಾಗಿ ಬಿಡಿಸಿ ತೋರಿಸಲು ಸಹಾಯಕವಾಗಿವೆ. ಯಾವುದೇ ಒಂದು ಜನಾಂಗದ ನಂಬಿಕೆ, ಸಂಪ್ರದಾಯ, ಆಚರಣೆ ಮುಂತಾದವುಗಳನ್ನು ಅಧ್ಯಯನ ಮಾಡುವ ಶಾಸ್ತ್ರಜ್ಞನಾಗಲೀ, ಅವನ ಸಾಮಾಜಿಕ ಸ್ಥಿತಿ-ಗತಿಗಳನ್ನು ತಿಳಿಯಬಯಸುವ ಸಮಾಜ ಶಾಸ್ತ್ರಜ್ಞನಾಗಲೀ, ಜನಪದರ ಜೀವನ ಹಾಗೂ ಸಾಹಿತ್ಯವನ್ನು ಅಭ್ಯಸಿಸುವ ಜಾನಪದ ವಿದ್ವಾಂಸನಾಗಲೀ ಅಲ್ಲಿಯ ಕರಕುಶಲ ಕಲೆಗಳನ್ನು ಗಮನಿಸದಿದ್ದರೆ ಆ ಅಧ್ಯಯನವು ಪೂರ್ಣವಾಗಲಾರದು. ಈ ನಿಟ್ಟಿನಲ್ಲಿ ವಾಲಿಯವರ ಈ ಲೇಖನ ಅಧ್ಯಯನಕಾರರಿಗೆ ತುಂಬಾ ಸಹಾಯಕಾರಿಯಾಗಿದೆ. ಈ ಲೇಖನದಲ್ಲಿ ವಿವಿಧ ಭಾಗಗಳಲ್ಲಿ ರಚನೆಯಾದ ಮನೆಗಳ ನಿರ್ಮಾಣದ ಬಗ್ಗೆ ತುಂಬಾ ಚೆನ್ನಾಗಿ ವಿಶ್ಲೇಷಿಸಿದ್ದಾರೆ. ಮಲೆನಾಡು, ಕರಾವಳಿನಾಡು, ಬಯಲು ಸೀಮೆಯಲ್ಲಿ ಕಂಡು ಬರುವ ಮನೆಗಳ ವೈವಿಧ್ಯದ ವಿವರಣೆಯನ್ನು ಕಾಣುತ್ತೇವೆ. ಮನೆಯ ಆಕಾರ, ರಚನೆ, ಪಡಸಾಲೆ, ಅಡುಗೆಮನೆ, ಚಪ್ಪರ, ತೊಲೆ, ಕಂಬ, ಅಟ್ಟಣಿಗೆ, ಚಾಕಟ್ಟು ಅದರ ಕುಸುರಿತನ ಮುಂತಾದ ವಿಷಯಗಳ ಕೂಲಂಕುಶ ವಿಚಾರಗಳನ್ನು ಸಂಗ್ರಹಿಸಿದ್ದಾರೆ. ಬಡಿಗ-ಕುಂಬಾರರಿಂದ ರಚನೆಯಾದ ಕಡಗೋಲು, ಚವರೆಮಣಿಗಳು, ಕಟ್ಟಿಗೆಯ ಕಪಾಟುಗಳು, ತೊಟ್ಟಿಲುಗಳು, ಮಕ್ಕಳ ಆಟಿಕೆಗಳು, ಹುಟ್ಟು-ಕೂಣಮಿಗೆ, ಚಪಾತಿಮಣಿ ಲಟ್ಟಣಿಗೆ, ಗಾಲಿಯ

ಮೇಲೆ ಉರುಳುತ್ತ ಸಾಗುವ ವಿಭೂತಿ ಪೆಟ್ಟಿಗೆ ತೇರು, ಕಟ್ಟಿಗೆಯ ಮಂಚ, ಹೊರಸಿನ ಕಾಲುಗಳು, ಒನಕೆ, ಒಕ್ಕಲುತನದ ಉಪಕರಣಗಳು, ಚಾಪೆ, ಬೀಸಣಿಕೆ, ಭಿತ್ತಿ, ಅಲಂಕಾರಗಳು ಕಲಾತ್ಮಕತೆಯಿಂದ ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ. ಕುಂಬಾರನಿಂದ ರಚನೆಗೊಂಡು ಮನೆಗಳಲ್ಲಿ "ಅಡಕಿಲ ಸಾಲುಗಳಾಗಿ" ಮಡಿಕೆ-ಕುಡಿಕೆಗಳು ಕಂಡುಬರುತ್ತವೆ. ಹಗ್ಗ ಇಲ್ಲವೆ ಈಚಲು ಗರಿಕೆಯಿಂದ ತಯಾರಿಸಿದ "ನೆಲವುಗಳ" ಮೇಲೆ ಹಾಲು-ಮೊಸರಿನ ಗಡಿಗೆಗಳನ್ನು ಇಡುತ್ತಾರೆ. ಜೊತೆಗೆ ಧಾನ್ಯಗಳನ್ನು ಇಡಲು ಗಡಿಗೆಗಳನ್ನು ಬಳಸುತ್ತಾರೆ. ಅಡಕಿಲ ನೋಡವುದಕ್ಕೇ ಸೊಗಸು.

"ಹಚ್ಚೆ-ರಂಗವಲ್ಲಿ" ನಮ್ಮ ನಾಡಿನ ಕರ-ಕುಶಲ ಕಲೆಗಳಾಗಿವೆ. ಹಚ್ಚೆ ಸ್ತ್ರೀಯರಿಗೆ ಸೌಂದರ್ಯವರ್ಧಕ ಸಾಧನವಾಗಿದೆ. ಹೆಚ್ಚಾಗಿ ಇವನ್ನು ಹಣೆ, ಗದ್ದ, ಕೆನ್ನೆ, ಎದೆ, ಕೈಕಾಲುಗಳ ಮೇಲೆ, ಗಿಳಿಪದ್ಮ, ಮಾಪಿನ ಎಲೆ, ನಾಗರಹೆಡೆ, ತುಲಿಯುಗುರು, ಹೂವು, ಹನುಮಂತನ ಚಿತ್ರ ಹೀಗೆ ವಿವಿಧ ವಿನ್ಯಾಸಗಳನ್ನು ಹಚ್ಚೆಯಿಂದ ಮೂಡಿಸಿಕೊಳ್ಳುತ್ತಾರೆ. ತಂದೆ, ತಾಯಿ, ಗಂಡನ ಹೆಸರುಗಳನ್ನು ಬರೆಯಿಸಿಕೊಳ್ಳುತ್ತಾರೆ. ರಂಗವಲ್ಲಿಯೂ ಕೂಡ ಒಂದು ಕಲೆಯಾಗಿದೆ. 'ಬಿಂಜಾಳ' ಎಂಬ ಬಿಳಿಯ ಕಲ್ಲಿನ ಪುಡಿಯಿಂದ ತಯಾರಿಸಿದ ಹಿಟ್ಟನ್ನು ರಂಗವಲ್ಲಿ ಬಿಡಿಸಲು ಬಳಸಲಾಗುತ್ತದೆ. ಚುಕ್ಕಿ ರಂಗವಲ್ಲಿ, ಚುಕ್ಕಿ ಇಟ್ಟು ಮನಬಂದತೆ ಬಿಡಿಸುವ ರಂಗವಲ್ಲಿ ಎಂಬ ಎರಡು ರೀತಿಯ ರಂಗವಲ್ಲಿ ಕಾಣುತ್ತೇವೆ. ಮೊದಲನೆಯದು 'ಎಳೆ ರಂಗವಲ್ಲಿ' ಎರಡನೇಯದು 'ವಿಭೂತಿ ರಂಗವಲ್ಲಿ'.

ಕರಕುಶಲ ಕಲೆಯಲ್ಲಿ ಬಣ್ಣ ಬಣ್ಣದ ದಾರ ಮತ್ತು ಸೂಜಿಯಿಂದ ಬಟ್ಟೆಯ ಮೇಲೆ ಬಿಡಿಸಿದ 'ಕಸೂತಿ ಕಲೆ'ಯೂ ಒಂದು. ಇದು ಅತ್ಯಂತ ಪ್ರಾಚೀನ ಕಲೆಯಾಗಿದೆ. ಕರಿ ಚಂದ್ರಕಾಳಿಯ ಸೀರೆಯ ಕಸೂತಿ ಕಲೆ ತುಂಬ ಜನಪ್ರಿಯ. ಇಂದು ಫ್ಯಾಶನ್ ಲೋಕದ ಪ್ರತೀಕವಾಗಿ ಕಸೂತಿ ಬಳಕೆಯಲ್ಲಿ ಜನಪ್ರಿಯವಾಗುತ್ತಿದೆ. ಹಳ್ಳಿ ಕಸೂತಿ, ಮುರಿಗೆಯ ಕಸೂತಿ, ಮೆಂಥೆಯ ಕಸೂತಿ, ನೇಯ್ಗೆಯ ಕಸೂತಿ ಎಂಬ ಪ್ರಕಾರದಲ್ಲಿ ಕಸೂತಿ ಕಂಡು ಬರುತ್ತದೆ. ಹಳ್ಳಿಗರ ಕೌದಿಗಳ ಮೇಲೆಯೂ ಇದರ ಹೆಣಿಕೆ ಕಂಡು ಬರುತ್ತದೆ.

ಕರ್ನಾಟಕದ ಕರಕುಶಲ ವಸ್ತುಗಳಲ್ಲಿ 'ಆಭರಣಗಳು' ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಸ್ತ್ರೀಯರು ಬಳಸುವ ಜೈತಲೆಸರ, ಪದಕ, ಬುಗುಡಿ, ಬೆಂಡವಾಲೆ, ಗುಬ್ಬಚಾಳ, ತಾಲೂಕ, ದ್ರಾಕ್ಷಿಪಟ್ಟಿ, ಸಿಂಗಾರ ಸರ, ಪುತಳೀಸರ, ಗೆಜ್ಜೆಟಿಕ್ಕೆ, ಗುಂಡಿನ ಟಿಕ್ಕೆ, ಬೋರಮಾಳ, ಎಕ್ಸಾರ, ಚಂದ್ರಹಾರ, ಮೋಹನಮಾಳ, ಸತ್ತು, ಮೂಗುತಿ, ವಂಕಿ, ಡಾಬ, ಕಾಲುಂಗರ, ಮೇನಪಿಲ್ಲೆ, ಕಳಾವರ ಪಿಲ್ಲೆ, ಪೈಜಣ, ಮುಂತಾದವುಗಳ ಬಗ್ಗೆ ವಾಲಿಯವರು ಚೆನ್ನಾಗಿ

ವಿವರಿಸಿದ್ದಾರೆ. ಜೊತೆಗೆ ವಾದ್ಯಗಳಾದ ತಾಳ, ಡಪ್ಪು, ಗಮಟೆ, ಬುರ್ರ, ಚಿಟಕೆ, ಡೊಳ್ಳು, ಕರಡಿ, ತಾಸೆ, ಡಗ್ಗಾ, ತಮ್ಮಟೆ, ಸನಾದಿ, ತೊಗಲಿನ ಗೊಂಬೆಗಳು, ಜೊತೆಗೆ ಇತರ ಕಲಾವಸ್ತುಗಳಾದ ಬೀಸುವ ಕಲ್ಲು, ಸುಣ್ಣದ ಡಬ್ಬಿ, ತೊಟ್ಟಿಲು, ದಂತದ ಕೆತ್ತನೆ, ಕಂಚಿನ ಮತ್ತು ಹಿತ್ತಾಳೆಯ ಪಾತ್ರೆ-ಪಗಡಗಳು, ಆಯುಧಗಳು, ಹಗ್ಗ-ಕಣ್ಣಿಯ ವಸ್ತುಗಳು, ಹೊಟ್ಟು ತುಂಬುವ ಹಗ್ಗದ ಜಾಳಿಗೆಗಳು ಮುಂತಾದ ಮಹತ್ವದ ವಿಷಯಗಳ ಮಾಹಿತಿಯನ್ನು ಡಾ. ವಾಲಿಯವರು ಒದಗಿಸಿದ್ದಾರೆ.

ಜಾನಪದ ರುಚಿ-ಅಭಿರುಚಿ, ಆಶೆ-ಆಕಾಂಕ್ಷೆಗಳು ಇಂದು ಬದಲಾಗುತ್ತ ನಡೆದಿರುವುದು ಗಮನಾರ್ಹ ಸಂಗತಿಯಾಗಿದೆ. ಅದಕ್ಕೆ ಅನುಗುಣವಾಗಿ ಕರಕುಶಲ ಕಲೆಗಳೂ ಬದಲಾವಣೆ ಆಗುತ್ತ ನಡೆದಿರುವುದು ಅನಿವಾರ್ಯ. ಇವುಗಳ ಮೂಲ ಸ್ವರೂಪವನ್ನು ಕುರಿತು ಅಧ್ಯಯನ ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ವಾಲಿಯವರ ಈ ಲೇಖನ ತುಂಬ ಕುತುಹಲಕಾರಿಯೂ ಉಪಯುಕ್ತವೂ ಆಗಿದೆ.

ಜಾನಪದ ಜೀವಾಳದ ಎರಡನೆಯ ಲೇಖನ 'ನಮ್ಮ ಜನಪದರ ಆಭರಣಗಳು' ಈ ಲೇಖನದಲ್ಲಿ ಸ್ತ್ರೀಯರ ಆಭರಣಗಳು, ಪುರುಷರ ಆಭರಣಗಳು ಮತ್ತು ಮಕ್ಕಳ ಆಭರಣಗಳ ಕುರಿತು ಸವಿಸ್ತಾರವಾದ ಚರ್ಚೆ ಮಾಡಿದ್ದಾರೆ. ಇಂದಿನ ಜನಾಂಗದ ಅಭಿರುಚಿ, ಆಲೋಚನೆಗಳು ಬದಲಾಗಿವೆ. ಅದಕ್ಕೆ ಅನುಗುಣವಾಗಿ ಆಭರಣಗಳಲ್ಲಿಯೂ ವಿಶೇಷವಾದ ಮಾರ್ಪಾಡುಗಳು ಕಂಡು ಬರುತ್ತಿವೆ. ಅಂತೂ ಈ ಲೇಖನ ಆಭರಣಗಳ ಕುತೂಹಲಕಾರಿ ಇತಿಹಾಸವನ್ನು ಹೊರಗೆಡುವುತ್ತದೆ.

'ತಂತಿ ವಾದ್ಯಗಳು' ಲೇಖನ ತಂತಿವಾದ್ಯದ ಉಗಮ ಉಪಯೋಗದ ಕುರಿತು ಹಾಗೂ ತಂತಿವಾದ್ಯಗಳ ಕುರಿತಾದುದಾಗಿದೆ. ಏಕತಾರಿ, ತಂಬೂರಿ, ಚೌಡಿಕೆ, ತುಂತುಣಿ, ಕಿನ್ನರಿ, ಕಾಮಾಕ್ಷಿ ಮುಂತಾದ ಜನಪದ ವಾದ್ಯಗಳು ತಂತಿವಾದ್ಯಗಳೆನಿಸಿವೆ. ಶಿಷ್ಟ ಸಂಗೀತ ಸಂಪ್ರದಾಯದ ವೀಣೆ, ಸಿತಾರ, ಸರೋದ, ಪಿಟೀಲು ಮೊದಲಾದ ತಂತಿವಾದ್ಯಗಳು ಜನಪದ ತಂತಿವಾದ್ಯಗಳ ಸುಧಾರಿಸಿದ ರೂಪಗಳಾಗಿವೆ. ತಂತಿಯ ಮಧ್ಯದ ತಂತಿಯ ಮಹತ್ವವನ್ನು "ರಾಗ ಬರುವಾಗ ತಂತಿ ಹರಿಯಿತು" ಎಂಬ ಗಾದೆಯಿಂದ ತಿಳಿದುಕೊಳ್ಳಬಹುದು. ತಂತಿವಾದ್ಯಗಳಲ್ಲಿ ಕಂಡುಬರುವ ಬೆರಳಿನಿಂದ ತಂತಿಯನ್ನು ಮೀಟಿ ಬಾರಿಸುವ ವಾದ್ಯಗಳು ಮತ್ತು ಗಜ ಇಲ್ಲವೇ ಕಮಾನಿನಿಂದ ತಂತಿಯನ್ನು ತೀಡಿ ಬಾರಿಸುವ ವಾದ್ಯಗಳು ಎಂಬ ಎರಡು ಪ್ರಕಾರಗಳನ್ನು ವಾಲಿಯವರು ಹೇಳಿದ್ದಾರೆ. ಕುಂಬಳ ಬುರುಡೆಯಿಂದ ತಯಾರಿಸಿದ ಸರಳವಾದ್ಯ ಏಕತಾರಿ, ಭಾರತೀಯ ಶೃತಿವಾದ್ಯ ತಂಬೂರಿ, ಶಕ್ತಿದೇವತೆಯ ಆರಾಧನಾ ಸಂಪ್ರದಾಯದಲ್ಲಿ ದೇವಿಯ ಚರಿತ್ರೆಯ

ಮಹಿಮೆಗಳನ್ನು ಭಕ್ತಿಯಿಂದ ಹಾಡುವಾಗ ಹಿನ್ನಲೆಯಾಗಿ ಬಳಸುವ ಚೌಡಿಕೆ ವಾದ್ಯ, ಚೌಡಿಕೆಯಂತೆಯೇ ಇದಕ್ಕೆ ಅತೀ ಸಮೀಪದ ತಂತಿವಾದ್ಯ ತುಂತುಣಿ, ಕಿನ್ನರಿ, ಬಳವಲಕಾಯಿ ಚಿಪ್ಪನ್ನೂ ಬರಿದು ಮಾಡಿ ತಯಾರಿಸಿದ ಕಾಮಾಕ್ಷಿ ಮುಂತಾದ ತಂತಿವಾದ್ಯಗಳನ್ನು ಕುರಿತು ತುಂಬಾ ಸೊಗಸಾದ ಮಾಹಿತಿಯನ್ನು ಈ ಲೇಖನದಿಂದ ಕಂಡುಕೊಳ್ಳುತ್ತೇವೆ.

**"ಜನಪದ ತ್ರಿಪದಿಗಳಲ್ಲಿ ಕಾಣುವ ಜೀವನ ಮೌಲ್ಯಗಳು"** ಲೇಖನ ಮೌಲ್ಯಗಳ ಮಹತ್ವವನ್ನು ಎತ್ತಿ ತೋರಿಸಿದೆ. ಜನಪದದಲ್ಲಿ ಬುದ್ಧಿಯ ಪ್ರಾಧಾನ್ಯತೆಗಿಂತ ಭಾವದ ವಾಸ್ತವಿಕತೆಯೇ ಹೆಚ್ಚಾಗಿರುವುದನ್ನು ನಾವು ಕಾಣುತ್ತೇವೆ. ತುಂಬ ವಿಶಾಲವಾದ ಅರ್ಥವನ್ನು ಹೊಂದಿರುವ ಮೌಲ್ಯದ ಬಗ್ಗೆ ಜನಪದರ ನಂಬಿಕೆಗಳೇ ವಿಶಾಲ. ವಿನಮ್ರ ಜಾನಪದ ಪದ್ಯ ಸಾಹಿತ್ಯದಲ್ಲಿ ತ್ರಿಪದಿಗಳದೇ ಸಿಂಹಪಾಲು. ಈ ತ್ರಿಪದಿಗಳಲ್ಲಿ ಕಾಣುವ ಜೀವನ ಮೌಲ್ಯಗಳನ್ನು ಪರಿಚಯಿಸುವುದು ಪ್ರಸ್ತುತ ಲೇಖನದ ಉದ್ದೇಶವಾಗಿದೆ. ದೇವರು, ಕಾಯಕ, ಪ್ರೀತಿ, ಕೃತಜ್ಞತೆ, ಔದಾರ್ಯ, ತ್ಯಾಗ, ದಯೆ, ಶಾಂತಿ, ಸಹಜೀವನ, ಸಹಕಾರ, ಜಾತೀಯತೆಯ ನಿರ್ಮೂಲನೆ, ಹೆಣ್ಣು-ಹೊನ್ನು-ಮಣ್ಣು ಮುಂತಾದ ಮೌಲ್ಯಗಳನ್ನು ಅನೇಕ ತ್ರಿಪದಿಗಳ ಉದಾಹರಣೆಗಳ ಮುಖಾಂತರ ವಾಲಿಯವರು ಸ್ಪಷ್ಟಪಡಿಸಿದ್ದಾರೆ.

ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ ।
ಎಳ್ಳು ಜೀರಿಗೆ ಬೆಳೆಯೋಳೆ । ಭೂಮಿತಾಯಿ ।
ಎದ್ದೊಂದು ಗಳಿಗಿ ನೆನೆದೇನ ॥ [೧]

ಎಂಬ ಭೂಮಿತಾಯಿಯ ಪ್ರಾರ್ಥನೆ. ಹಲವು ದೇವರುಗಳನ್ನು ನಂಬಿದ ಜನಪದರು "ದೇವನೊಬ್ಬ ನಾಮ ಹಲವು" ಎಂಬುದನ್ನು ಮನಗಂಡಿದ್ದಾರೆ. ಒಟ್ಟಿನಲ್ಲಿ ದುಡಿಮೆಯೇ ದೇವರು, ನೆಲವೇ ಜೀವಂತ ಕೈಲಾಸ' ಎಂಬುದು ಅವರ ಬಲವಾದ ನಂಬಿಕೆಯನ್ನು ತಿಳಿಸುತ್ತದೆ. ಇಲ್ಲಿ ದೈವ, ದೇವರು, ಧರ್ಮದ ಬಗ್ಗೆ ಇರುವ ಮೌಲಿಕತೆಯನ್ನು ತಿಳಿದುಕೊಳ್ಳುತ್ತೇವೆ.

'ಕಾಯಕ' ಎನ್ನುವುದು ಜನಪದರ ಮತ್ತೊಂದು ಮೌಲ್ಯ. 'ಕಾಯಕವೇ ಕೈಲಾಸ' ಎಂಬಂತೆ

ಕಾಯಕವೆ ಶಿವಭಕ್ತಿ ಕಾಯಕವೇ ಶಿವಭಜನೆ
ಕಾಯಕವೆ ಲಿಂಗ ಶಿವಪೂಜೆ । ಶಿವಯೋಗ
ಕಾಯಕವೆ ಕಾಯ್ವ ಕೈಲಾಸ ॥ [೨]

---

೧. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೪೭ ಮುದ್ರಣ ವರ್ಷ ೧೯೯೩-೯೭
೨. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೪೮ ಮುದ್ರಣ ವರ್ಷ ೧೯೯೩-೯೭

ಎಂದು ಕಾಯಕದ ಮಾಹಿತಿಯನ್ನು ಚಿತ್ತರಿಸಿದ್ದಾರೆ. ಹಾಗೆಯೇ ಪ್ರೀತಿ ಎಂಬ ಮೌಲ್ಯವು ಮಾನವನಲ್ಲಿರಬೇಕಾದ ಒಂದು ಆದರ್ಶ ತತ್ವವಾಗಿದೆ. ಉದಾಹರಣೆಗೆ ನಮ್ಮ ಗೃಹಿಣಿ, ತಾಯಿಯನ್ನೂ ನೆನೆದು ತನ್ನ ಪ್ರೀತಿಯ ಹೊನಲನ್ನೇ ಹರಿಸಿದ್ದಾಳೆ ;

ತಾಯಿ ಕಾಣದ ಜೀವ ತಾವೂರಿ ಬಾವೂರಿ ।
ಭಾಳ ಬಿಸಲಾನ ಅವರೀಯ । ಹೂವಿನಾಂಗ ।
ಬಾಡಲೇನಿ ತಾಯಿ ಕದೆದೊಯ್ಯ । [೩]

ಇಂತಹ ಹಲವಾರು ತ್ರಿಪದಿಗಳ ಮೂಲಕ ಜನಪದರು ವ್ಯಕ್ತಪಡಿಸುವ ಪ್ರತಿಯನ್ನು ಈ ಸಾಹಿತ್ಯದ ಮೂಲಕ ನಿರರ್ಗಳವಾಗಿ ಹರಿಸಿದ್ದನ್ನು ಕಾಣುತ್ತೇವೆ. 'ಕೃತಜ್ಞತೆ' ಎನ್ನುವುದು ನಮ್ಮಲ್ಲಿರುವ ಮತ್ತೊಂದು ಪರಮತತ್ವ ಮೌಲ್ಯ. ಉಪಕಾರ ಸ್ಮರಣೆ. ಜನಪದ ಕವಯಿತ್ರಿಯರು ತವರು, ತಂದೆ-ತಾಯಿ, ಬಂಧು ಬಳಗವನ್ನು ಕೃತಜ್ಞತಾ ಭಾವದಿಂದ ಸ್ಮರಿಸುವ ಅನೇಕ ತ್ರಿಪದಿಗಳು ಕಂಡು ಬರುತ್ತವೆ.

ಹಾಲುಂಡ ತವರೀಗಿ ಏನೆಂದು ಹಾಡಲೆ ।
ಹೊಳೆದಂಡೀಲಿರುವ ಕರಕೀಯ । ಕುಡಿಯಂಗ ।
ಹಬ್ಬಲೆ ಅವರ ರಸಬಳ್ಳಿ ॥ [೪] ಎಂದು ತನಗೆ ಜನ್ಮವಿತ್ತ, ಪಾಲನೆ ಪೋಷಣೆ ಮಾಡಿದ ತವರು ಮನೆಯನ್ನು ನೆನೆಯುತ್ತಾಳೆ. 'ಔದಾರ್ಯ' ಮಾನವನು ನೆಮ್ಮದಿಯ ಜೀವನ ಸಾಗಿಸಬೇಕಾದರೆ ತೀರ ಅವಶ್ಯವಾಗಿ ಇರಬೇಕಾದುದಾಗಿದೆ. ಜೀವನವು ಸುಖ-ದುಃಖಗಳ ಸಮ್ಮಿಲನ.

ಆದುದರಿಂದ ಪ್ರತಿಯೊಂದನ್ನೂ ನಾವು ಸಮಭಾವದಿಂದ ಕಾಣಬೇಕಾದುದು ಅನಿವಾರ್ಯವಾಗಿದೆ. ಇಲ್ಲವಾದರೆ ಸುಖವೂ ಬಿಸಿಲ್ಗುದುರೆಯಾಗಿ ಪರಿಣಮಿಸುತ್ತದೆ. ಗರತಿಯ ಔದಾರ್ಯವನ್ನು ನೋಡಿದಾಗ :

ಕಣ್ಣು ಕಾಣುವತನಕ ಬೆನ್ನು ಬಾಗುವತನಕ ।
ತಾಯಿರಲಿ ನನಗ ತವರಿರಲಿ । ಹಡದವ್ವ ।
ಅಣ್ಣಯ್ಯರಿರಲಿ ಕರಿಸಾಕ ॥ [೫]

೩. ಜಾನಪದ ಜೀವಾಳ ; ಡಾ ॥ ಎಂ.ಎನ್. ವಾಲಿ ಪು.ಸಂ. ೪೮ ಮುದ್ರಣ ವರ್ಷ ೧೯೯೩-೯೭
೪. ಜಾನಪದ ಜೀವಾಳ ; ಡಾ ॥ ಎಂ.ಎನ್. ವಾಲಿ ಪು.ಸಂ. ೫೦ ಮುದ್ರಣ ವರ್ಷ ೧೯೯೩-೯೭
೫. ಜಾನಪದ ಜೀವಾಳ : ಡಾ ॥ ಎಂ.ಎನ್. ವಾಲಿ ಪು.ಸಂ. ೫೧ ಮುದ್ರಣ ವರ್ಷ ೧೯೯೩-೯೭

ಸುತ್ತಲಿರುವ ಬಳಗವೆಲ್ಲ ಸುಖದಿಂದ ಇರಲಿ ಎಂದು ಹಾರೈಸಿದ್ದಾಳೆ. 'ತ್ಯಾಗ' ಎನ್ನುವುದೂ ಕೂಡ ಒಂದು ಆದರ್ಶ ಮೌಲ್ಯ, ಸ್ತ್ರೀಯು ತ್ಯಾಗದ ಮೂರ್ತಿ, ಅವಳಿಗೆ ಕೆಲವೊಮ್ಮೆ ತಾನೇಕೆ ಹೆಣ್ಣಾಗಿ ಹುಟ್ಟಿದೆನೋ ಎಂಬ ಆತಂಕ :

ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುದು ಲೇಸ ।
ಮಣ್ಣಿನ ಮ್ಯಾಲ ಮರವಾಗಿ । ಬೆಳೆದರ ।
ಬಂದವರಿಗಿ ನೆರಳ ॥ [೬] ಎಂದು ತನ್ನ ಬಾಳನ್ನೇ ಕಡೆಗಣಿಸಿದ್ದಾಳೆ. ಅಂತೆಯೇ ತ್ಯಾಗ ಮನೋಭಾವ ಅವಳಲ್ಲಿ ಜಾಗೃತವಾಗಿದೆ. ಹಾಗೆಯೇ ಜನಪದ ತ್ರಿಪದಿಗಳಲ್ಲಿ 'ದಯೆ' ಅಂದರೆ ದಯಾಗುಣವು ಹಾಸುಹೊಕ್ಕಾಗಿ ಬಂದಿದೆ.

ಕಗ್ಗಾಯಿ ಕಡಿಬ್ಯಾಡ್ರಿ ಹೊಡಿದಂಟ ಮರಿಬ್ಯಾಡ್ರಿ ।
ಹೂಡಿ ಬಸವನ ಬಡಿಬ್ಯಾಡ್ರಿ । ಸ್ವಾಮಾರ ದಿನ ।
ಹೊಸ ಮಗನಾಗಿ ತಿರುಗ್ಯಲಿ ॥ [೭]

ದಯಾಭಾವದಿಂದ ಒಂದು ದಿನವಾದರೂ ಬಸವಣ್ಣ ವಿಶ್ರಾಂತಿ ಪಡೆಯಲೆಂದು ಚಿತ್ರಿಸಿದ್ದಾರೆ. ಹೀಗೆ ಜನಪದ ತ್ರಿಪದಿಗಳಲ್ಲಿ ದಯಾಭಾವದ ಬಗ್ಗೆ ಚಿಮ್ಮಿದುದ್ದನ್ನು ಕಾಣುತ್ತೇವೆ. "ಶಾಂತಿ" ಎಂಬ ಮೌಲ್ಯ ಮಹೋನ್ನತ ತತ್ವವಾಗಿದೆ. 'ಸಿಟ್ಟು ತನ್ನ ವೈರಿ, ಶಾಂತಿ ಪರರ ವೈರಿ' ಎಂದು ಹೇಳುವುದುಂಟು. ಮಾನವನ ಮಾನಸಿಕ ಶಾಂತಿ ಕಡಿದಾಗ ಹಲವಾರು ಅನಾಹುತಗಳು ಘಟಿಸುತ್ತವೆಂಬುದು ಎಲ್ಲರಿಗೂ ತಿಳಿದ ವಿಷಯ ಎಂತಹ ಪ್ರಸಂಗದಲ್ಲಿಯೂ ನಮ್ಮ ಗರತಿ ಶಾಂತಿಯನ್ನು ಕಾಪಾಡಿಕೊಂಡು ಬಂದಿದ್ದಾಳೆ.

ಪರಿಮಳದರಸರು ಪರನಾರಿಗ್ಹೋದರ ।
ಮನಿಮಡದಿ ಬಾಯಿ ಬಿಡಬ್ಯಾಡ । ತಾವ್ತಮ್ಮ ।
ಮನಹೇಸಿ ಮನಿಗಿ ಬರತಾರ ॥ [೮]

ಇಂತಹ ಶಾಂತಿಪಾಠ ನಮ್ಮ ಗರತಿಯರದು. 'ಸಹ ಜೀವನ' ಮನುಷ್ಯನಿಗೆ ತುಂಬಾ ಅವಶ್ಯಕ. ಕಾರಣ ಮಾನವ ಸಂಘಜೀವಿ, ಸಮಾಜಜೀವಿ. ಆತ ಏಕಾಂಗಿಯಾಗಿ ಬದುಕಲಾರ ಕೂಡಿ ಬಾಳುವುದರಿಂದಲೇ ಅವನ ಜೀವನ ಸಾರ್ಥಕವೆನಿಸಿದೆ. ಜೊತೆಗೆ 'ಸಹಕಾರ' ತತ್ವವನ್ನೂ ನಾವು ಪಾಲಿಸುತ್ತಿದ್ದರೆ ಸಹಜಜೀವನಕ್ಕೆ ಬೆಲೆ ಬರುತ್ತದೆ.

---

೬. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೫೩ ಮುದ್ರಣ ವರ್ಷ ೧೯೯೩-೯೭
೭. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೫೪ ಮುದ್ರಣ ವರ್ಷ ೧೯೯೩-೯೭
೮. ಜಾನಪದ ಜೀವಾಳ ; ಡಾ ॥ ಎಂ.ಎಸ್. ವಾಲಿ ಪು.ಸಂ. ೫೫ ಮುದ್ರಣ ವರ್ಷ ೧೯೯೩-೯೭

ಜಾತೀಯತೆ ನಿರ್ಮೂಲನೆಯ ಮೌಲ್ಯವನ್ನು ನಾವು ಹಲವಾರು ತ್ರಿಪದಿಗಳಲ್ಲಿ ಕಾಣುತ್ತೇವೆ. ಜಾತೀಯತೆ ನಮ್ಮ ಸಮಾಜಕ್ಕೆ ಅಂಟಿದ ಒಂದು ದೊಡ್ಡ ಕಳಂಕ. ಜಾತೀಯತೆಯ ವಿಷಬೀಜವನ್ನು ಕಿತ್ತೊಗೆಯಲು ಶ್ರಮಿಸಿದವರು ನಮ್ಮ ಶಿವಶರಣರು. ಶರಣರ ಕಥನ ಗೀತಗಳಲ್ಲಿ ಹಲವಾರು ಜಾನಪದರು ಹಾಡಿಕೊಂಡಾಡಿದ್ದಾರೆ. ಬಸವಣ್ಣನವರ ಹಾಡಿನಲ್ಲಿ ;

ಹೊಲೆಯ ಮಾದಿಗರೆಂಬ ಬಲೆಯಾತ ಕಿತ್ತೊಗೆದ ।
ಭಲರೆ ಬಸವಯ್ಯ ಬಸವರಸ । ನಿನ್ವೆಸರು ।
ನೆಲೆಯಾತು ನಿತ್ಯ ಜನಪದಕೆ ॥ [೯]

'ಹೆಣ್ಣು ಹೊನ್ನು-ಮಣ್ಣು' ಇವು ತ್ಯಾಜ್ಯ. ಮಾನವರನ್ನು ಅಧಃಪತನಗೊಳಿಸುವ ಸಾಧನಗಳು. ಅಂತೆಯೇ ನಮ್ಮ ಜನಪದರು ಇವುಗಳನ್ನು ಕುರಿತು ಎಚ್ಚರದಿಂದಿದ್ದು ಅವುಗಳನ್ನು ಪದೇ ಪದೇ ಎಚ್ಚರಿಸಿದ್ದಾರೆ. ಬಾಳಿನ ಅತ್ಯಂತಿಕ ಗುರಿ ಮೋಕ್ಷ ಸಾಧನೆ. ನಾವು ಶುದ್ಧವಾಗಿಲ್ಲದೆ ಅವು ದೊರೆಯವು. ಈ ಕುರಿತ ಜಾನಪದವಾಣಿ ಹೀಗಿದೆ

ಮುಗ್ಧ ಶರಣರಹಾಡು ಸಿಧ್ಧಿಮಂತ್ರವು ನೋಡು ।
ಸಿದ್ಧಾಗೊ ಹಾಡು ಹಾಡುದಕೆ । ಎಲೆ ಜೀವ ।
ಶುದ್ಧಾಗಿ ಹೊಂದು ಶಿವಪಥವ ॥ [೧೦]

ಹೀಗೆ ಜಾನಪದ ತ್ರಿಪದಿಗಳಲ್ಲಿ ಅಡಕವಾದ ಕೆಲವು ಪ್ರಮುಖವಾದ ಜೀವನಮೌಲ್ಯಗಳನ್ನೂ ಸಂಕ್ಷಿಪ್ತವಾಗಿ ಅವಲೋಕನ ಮಾಡಿದ್ದಾಯಿತು. ಈ ಸಾಹಿತ್ಯದಲ್ಲಿ ನಿತ್ಯ ಜೀವನವು ಇದ್ದಕ್ಕಿದ್ದಂತೆ ಮೂಡಿ ಬಂದಿದೆ. ಈ ಸಾಹಿತ್ಯದ ಅಭ್ಯಾಸ ವಿವಿಧ ರೀತಿಯಲ್ಲಿ ಹಲವಾರು ಮುಖವಾಗಿ ನಡೆದಷ್ಟೂ ನಮ್ಮ ನಾಡಿನ ಸಂಸ್ಕೃತಿಗೆ, ಜನತೆಗೆ ಹಿತಕರ. ಈ ನಿಟ್ಟಿನಲ್ಲಿ ವಾಲಿಯವರ ಪ್ರಸ್ತುತ ಲೇಖನ ಮಹತ್ವ ಪೂರ್ಣವಾದುದಾಗಿದೆ.

'ಜಾನಪದ ಸಾಹಿತ್ಯಕ್ಕೆ ವಿಜಾಪೂರ ಜಿಲ್ಲೆಯ ಕೊಡುಗೆ' ಎಂಬುದು ೧೯೮೭ ರ ನವ್ಹೆಂಬರ್ ೨೧, ೨೨ ರಂದು ಚಡಚಣದಲ್ಲಿ ಜರುಗಿದ ವಿಜಾಪೂರ ಜಿಲ್ಲೆಯ ೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಾದರ ಪಡಿಸಿದ ಪ್ರಬಂಧವಾಗಿದೆ. ಬಿಜಾಪೂರ ಜಿಲ್ಲೆಯ ಜಾನಪದ ಸಾಹಿತ್ಯ ಸಮೀಕ್ಷೆಯನ್ನು ಇಲ್ಲಿ ಕಾಣುತ್ತೇವೆ. ಜೊತೆಗೆ ಬಿಜಾಪೂರ ಜಿಲ್ಲೆಯ ಜಾನಪದ ಸಾಹಿತಿಗಳು ಹಾಗೂ ಅವರ ಸಾಹಿತ್ಯ ಗ್ರಂಥಗಳನ್ನು ಕುರಿತು ವಿವರಿಸಿದ್ದಾರೆ. ಕಥಾ ಸಾಹಿತ್ಯ, ಗಾದೆಗಳು, ಒಡಪುಗಳು, ಜಾನಪದ ಮಕ್ಕಳ ಸಾಹಿತ್ಯ ಮುಂತಾದ ವಿಷಯಗಳ ಸಮಗ್ರ ಮಾಹಿತಿ ದೊರೆಯುತ್ತದೆ.

---

೯. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೫೮ ಮುದ್ರಣ ವರ್ಷ ೧೯೯೩-೯೭
೧೦. ಜಾನಪದ ಜೀವಾಳ : ಡಾ ॥ ಎಂ.ಎಸ್. ವಾಲಿ ಪು.ಸಂ. ೫೯ ಮುದ್ರಣ ವರ್ಷ ೧೯೯೩-೯೭

'ಗುಳ್ಳವ್ವ-ಒಂದು ಸಾಂಪ್ರದಾಯಿಕ ಆಚರಣೆ' ಎಂಬುದು ಜನಮೆಚ್ಚುಗೆ ಪಡೆದ ಲೇಖನವಾಗಿದೆ. ೧೯೮೮ ರ 'ಜಾನಪದ ಜಗತ್ತು' ಸಂಪುಟ ೯, ಸಂಚಿಕೆ ೪ ರಲ್ಲಿ ಈ ಲೇಖನ ಪ್ರಕಟಗೊಂಡಿದೆ. ಗುಳ್ಳವ್ವನ ಆಚರಣೆಯು ಉತ್ತರ ಕರ್ನಾಟಕದ ವಿಶಿಷ್ಟ ಹಬ್ಬವಾಗಿದೆ. ಜಾನಪದರ ಮುಗ್ಧ ಭಾವನೆಯಲ್ಲಿ ಉದಯಿಸಿದ ಕಾಲ್ಪನಿಕ ದೇವತೆ, ಮಣ್ಣು ಮುದ್ದೆ ಸ್ತ್ರೀ ಆಕಾರ ತಾಳಿದಾಗ "ಗುಳ್ಳವ್ವ" ಎಂದಾಯಿತು.

ಗುಳ್ಳವ್ವ ಪದದ ವ್ಯುತ್ಪತ್ತಿಯ ಬಗ್ಗೆ ಹೀಗೆ ಹೇಳಿದ್ದಾರೆ. ಗೋಲ (ಪೃಥ್ವಿ), ಅವ್ವ (ತಾಯಿ), ಗೋಲವ್ವ (ಭೂಮಿತಾಯಿ) ಇತ್ಯಾದಿ. ಗುಳ್ಳವ್ವನ ಪೂಜಿಸುವ ಬಗೆ. ಗುಳ್ಳವ್ವನ ಕುರಿತಾದ ಕಥೆಗಳನ್ನು ವಾಲಿಯವರು ಚೆನ್ನಾಗಿ ಕಥಿಸಿದ್ದಾರೆ. ಗುಳ್ಳವ್ವನ ಆಚರಣೆ ಪರಸ್ಪರರಲ್ಲಿ ಪ್ರೀತಿ ವಿಶ್ವಾಸಗಳನ್ನು ಬೆಳೆಸುತ್ತದೆ. ಈ ಹಬ್ಬದಲ್ಲಿ ಹಳ್ಳಿಯ ಮಕ್ಕಳ ಮುಗ್ಧ ಭಾವನೆಗಳು ಮನರಂಜನೆಯನ್ನು ನೀಡಿ ಬಾಳಿನ ಆಸರಿಕೆ ಬೇಸರಿಕೆಗಳನ್ನು ಹೋಗಲಾಡಿಸುತ್ತವೆ. ಇಂತಹ ಪರಂಪರೆಯನ್ನು ಉಳಿಸುವ ನಿಟ್ಟಿನಲ್ಲಿ ಈ ಲೇಖನ ತುಂಬಾ ಸಹಾಯಕಾರಿಯಾಗಿದೆ.

'ಜನಪದ ಗಾದೆಗಳು' ೧೯೮೮ ರ ಅಕ್ಟೋಬರ್ ೨೯ ಹಾಗೂ ೩೦ ರಂದು ವಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿಯಲ್ಲಿ ಜರುಗಿದ ಜಿಲ್ಲಾಮಟ್ಟದ ಜಾನಪದ ಕಲಾಮೇಳದಲ್ಲಿ ಮಂಡಿಸಿದ ಪ್ರಬಂಧವಾಗಿದೆ. ಇದನ್ನು "ಹೊನ್ನು ತೂಗಿದ ನೆಲ" ಎಂಬ ಹೆಸರಿನ ಆ ಕಲಾಮೇಳದ ಸ್ಮರಣ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಗಾದೆಯ ಅರ್ಥ, ಗಾದೆಯ ಲಕ್ಷಣ, ಕೃಷಿ ರಂಗದ ಗಾದೆಗಳು, ವ್ಯವಹಾರ ಚಾತುರ್ಯವನ್ನು ಎತ್ತಿ ತೋರಿಸುವ ಗಾದೆಗಳು, ದಡ್ಡತನ ಪ್ರದರ್ಶಿಸುವ ಗಾದೆಗಳು, ಊಟೋಪಚಾರ, ಜಾತೀಯತೆಗೆ ಸಂಬಂಧಿಸಿದ ಗಾದೆಗಳು, ಹಾಸ್ಯರಸ ಉಕ್ಕಿಸುವ ಗಾದೆಗಳು, ಪೌರಾಣಿಕ, ಐತಿಹಾಸಿಕ ಗಾದೆಗಳು, ಹೆಣ್ಣು ಮಕ್ಕಳ ಗಾದೆಗಳು, ದ್ವಂದ್ವಾರ್ಥದ ಗಾದೆಗಳು, ಅಶ್ಲೀಲ ಗಾದೆಗಳು ಕಥೆಯಾಧಾರಿತ ಗಾದೆಗಳನ್ನು ಕುರಿತಾದ ವಿಷಯ ಮತ್ತು ಕೆಲವೊಂದು ಗಾದೆಗಳನ್ನು ಈ ಲೇಖನದಲ್ಲಿ ಕಾಣುತ್ತೇವೆ. ಗಾದೆಗಳ ಸಮಗ್ರ ಅಧ್ಯಯನಕ್ಕೆ ವಾಲಿಯವರ ಈ ಲೇಖನ ಮಾರ್ಗಸೂಚಿಯಾಗಿದೆ.

"ದನಗಳ ಸುಳಿ ಹಾಗೂ ಶುಭಾಶುಭ ಲಕ್ಷಣಗಳು" ೧೯೮೯ ರ ಜುಲೈ-ಅಗಷ್ಟ 'ಜಾನಪದ ಜಗತ್ತು' ಪತ್ರಿಕೆ ಅಂದರೆ ಸಂಪುಟ ೧೦ ಸಂಚಿಕೆ ೪ ರಲ್ಲಿ ಈ ಲೇಖನ ಬೆಳಕು ಕಂಡಿದೆ. ಒಕ್ಕಲಿಗರಿಗೆ ದನಗಳೇ ಸಂಪತ್ತು, ಪಶುಪಾಲನೆ ಅವರ ಮತ್ತೊಂದು ಉದ್ಯೋಗ. ಪಶುಗಳನ್ನು ಕೊಳ್ಳುವ ರೈತನು ದನಗಳ ಸುಳಿ ಹಾಗೂ ಲಕ್ಷಣಗಳನ್ನು ನೋಡಿಕೊಳ್ಳುವುದುಂಟು. ಅಂತೆಯೇ 'ತಳಿ ನೋಡಿ ಹೆಣ್ಣು ತರಬೇಕು, ಸುಳಿ ನೋಡಿ ದನಾ ತರಬೇಕು' ಎಂಬ ಗಾದೆ ರೂಢಿಯಲ್ಲಿದೆ.

'ಸುಳಿ' ಇದು ದನಗಳಿಗೆ ಹುಟ್ಟಿನಿಂದ ಬಂದುದು ಅಲ್ಲದೇ ಸಾಯುವವರೆಗೆ ಉಳಿಯುವಂತಹುದು. ಅಂತೆಯೇ ಹೀನ ಸುಳಿ ಬೋಳಿಸಿದರೆ ಹೋದೀತೆ? ಎಂಬುದು ಸತ್ಯಾಸತ್ಯತೆಯಿಂದ ಕೂಡಿದುದಾಗಿದೆ. ಈ ಲೇಖನದಲ್ಲಿ ವಾಲಿಯವರು ಸುಳಿಯ ಹೆಸರು, ಇರುವ ಸ್ಥಳ, ಶುಭಾಶುಭ ನಂಬಿಕೆಗಳ ಮಾಹಿತಿಯ ಪಟ್ಟಿಯನ್ನೇ ಕೊಟ್ಟಿದ್ದಾರೆ.

"ದನಗಳ ರೋಗಗಳು ಹಾಗೂ ಚಿಕಿತ್ಸೆ" ಈ ಲೇಖನವು 'ಜಾನಪದ ಜಗತ್ತು' ಪತ್ರಿಕೆಯ ಸಂಪುಟ ೧೧ ಸಂಚಿಕೆ ೪-೫ ರಲ್ಲಿ ಅಂದರೆ ೧೯೯೦ ರ ಜುಲೈ-ಅಕ್ಟೋಬರ ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಪ್ರಾಣಿಗಳಿಗೆ ಅಂದರೆ ದನಕರುಗಳಿಗೆ ಬರುವ ರೋಗದ ಮಾಹಿತಿ, ಹಾಗೂ ಅವುಗಳಿಗೆ ನೀಡುವ ಚಿಕಿತ್ಸೆಯನ್ನು ಕುರಿತಾದ ಲೇಖನ ಬಹು ಉಪಯೋಗಕಾರಿಯಾದ, ಮಾಹಿತಿ ಪೂರ್ಣವಾದ ಲೇಖನವಾಗಿದೆ.

'ಶಿವಶರಣರು ಮತ್ತು ಜಾನಪದ ಮೌಲ್ಯಗಳು' ೧೯೮೮ ರ ಜನೇವರಿ ೧ ರಿಂದ ೭ ರವರೆಗೆ ಸಂಕೇಶ್ವರದಲ್ಲಿ ಜರುಗಿದ ಇಲಕಲ್ಲ ವಿದ್ಯಾಪೀಠದ ೧೧ ನೆಯ ಶಿವಾನುಭವ ತರಬೇತಿ ಶಿಬಿರದಲ್ಲಿ ಸಾದರ ಪಡಿಸಿದ ಪ್ರಬಂಧವಾಗಿದೆ. ನಂತರ "ಬಸವ ಬೆಳಗು" ಪತ್ರಿಕೆಯ ಸಂಪುಟ ೨ ಸಂಚಿಕೆ ೪ ಅಂದರೆ ೧೯೮೮ ರ ಜುಲೈ-ಸಪ್ಟೆಂಬರ್ ಸಂಚಿಕೆಯಲ್ಲಿ ಇದು ಪ್ರಕಟಗೊಂಡಿತು. ಜಾನಪದ ಸಾಹಿತ್ಯದಲ್ಲಿ ಕಾಯಕ, ಜಾತೀಯತೆಯ ನಿರ್ಮೂಲನ, ದಯೆ, ದಾನ, ಛಲ, ಶಾಂತಿ, ಸಹಕಾರ, ಸಹಜೀವನ ಮೊದಲಾದ ಶಾಶ್ವತ ಜೀವನ ಮೌಲ್ಯಗಳು ಶರಣರ ಚರಿತ್ರೆಯ ಮುಖಾಂತರ ತ್ರಿಪದಿಗಳಲ್ಲಿ ಹೇಗೆ ಅಭಿವ್ಯಕ್ತವಾಗಿವೆಯೆಂಬುದನ್ನು ಈ ಲೇಖನದಲ್ಲಿ ಬಹಳ ಸೊಗಸಾಗಿ ನಿರೂಪಿಸಿದ್ದಾರೆ.

'ಜಾನಪದ ಗಾನ ಗಂಧರ್ವ- ದಿ ಬಾಳಪ್ಪ ಹುಕ್ಕೇರಿ' ಎಂಬ ಲೇಖನ ಈ ಗ್ರಂಥಕ್ಕಾಗಿಯೇ ಬರೆದುದಾಗಿದೆ. "ಸಾವಿರ ಹಾಡಿನ ಸರದಾರ"ನ ಕುರಿತು ಸಮಗ್ರವಾದ ಮಾಹಿತಿಯನ್ನು ಒದಗಿಸುತ್ತದೆ. ಜನಪದ ಕಲೆಯ ಅನುಪಮ ಆಸ್ತಿಯಾಗಿರುವ ಬಾಳಪ್ಪ ಹುಕ್ಕೇರಿ ಅವರ ಜನನ, ಬಾಲ್ಯ, ವಿದ್ಯಾಭ್ಯಾಸ, ಕೌಟುಂಬಿಕ ಜೀವನ, ಅವರ ಕಲಾರಾಧನೆ, ವೇಷಭೂಷಣ, ನಡೆನುಡಿ ಪ್ರಶಸ್ತಿ-ಸನ್ಮಾನ ಸಮಾರಂಭಗಳ ಬಗ್ಗೆ ವಿವರವಾದ ವಿಶ್ಲೇಷಣೆ ಮಾಡುವುದರ ಮೂಲಕ ನಾಡಿಗೆ ಕಂಚಿನ ಕಂಠದ ಕೋಗಿಲೆಯನ್ನೂ ಪರಿಚಯಿಸಿದ್ದಾರೆ. ಇಂದು ಈ ಕೋಗಿಲೆ ನಮ್ಮೆದುರು ಇಲ್ಲವಾದರೂ ಹಾಡಿನ ಕಲೆಯಿಂದ ಅಜರಾಮರರಾಗಿದ್ದಾರೆ. ಅಂತಹ ದಿವ್ಯ ಚೇತನದ ಪರಿಚಯ ಮಾಡಿಕೊಟ್ಟುದುದು ವಾಲಿಯವರು ಜನಪದ ಕಲಾವಿದರ ಮೇಲೆ ಇಟ್ಟ ಪ್ರೀತಿಯನ್ನೂ ಎತ್ತಿ ತೋರಿಸುತ್ತದೆ.

ಒಟ್ಟಿನಲ್ಲಿ 'ಜಾನಪದ ಜೀವಾಳ' ಗ್ರಂಥವು ಸಂಶೋಧಕರಿಗೆ, ಜಾನಪದ ವಿದ್ವಾಂಸರಿಗೆ ಉಪಯುಕ್ತವಾಗಿದ್ದು, ಒಳ್ಳೆಯ ಆಕರ ಗ್ರಂಥವಾಗಿದೆ. ಇದು ಲೇಖಕ ಡಾ.ಎಂ.ಎಸ್. ವಾಲಿ ಅವರ ಆಳವೂ, ಖಚಿತವೂ ಆದ ವಿಚಾರಗಳಿಂದ ಕೂಡಿದ ಸತ್ವಭರಿತ ಗ್ರಂಥವೆನಿಸಿದೆ.

**ಲೇಖನ ಸಂಪದ :**

ಡಾ. ವಾಲಿಯವರ ಅಭ್ಯಸ್ತ ಲೇಖನಿಯಿಂದ ಇಳಿದು ಬಂದ ಪ್ರಸ್ತುತ ಗ್ರಂಥ-ಲೇಖನ ಸಂಪದ ಈ ವರೆಗೆ ಇವರು ಸೃಷ್ಟಿಸಿದ ಸಾಹಿತ್ಯ ಸಂಪದವನ್ನು ಎತ್ತಿ ತೋರಿಸುತ್ತದೆ. ಆಗಾಗ ಹಲವು ವಿಷಯಗಳ ಬಗೆಗೆ ಬರೆದಿಟ್ಟ ಕಡತದಿಂದ ಹನ್ನೆರಡನ್ನು ಆಯ್ದು ಸರಗೊಳಿಸಿದ ಸಂಕಲನ ಇದಾಗಿದೆ. ಈ ಗ್ರಂಥದ ಮುಕ್ಕಾಲು ಲೇಖನಗಳು ನಾಡಿನ ಹೆಸರಾಂತ ಪತ್ರಿಕೆಗಳಲ್ಲಿಯೂ, ಸಂಚಿಕೆಗಳಲ್ಲಿಯೂ, ಸಂಸ್ಮರಣ ಗ್ರಂಥಗಳಲ್ಲಿಯೂ ಪ್ರಕಟವಾಗಿ ಸಹೃದಯರ ಮೆಚ್ಚುಗೆಗೆ ಪಾತ್ರವಾಗಿದೆ. ಇದು ರೈತಾಪಿ ಹಳ್ಳಿಗರು ಸಂಕ್ರಮಣ ಕಾಲಕ್ಕೆ ಭೋಗಿ ದಿನ ಹತ್ತು ಹನ್ನೆರಡು ಕಾಳುಕಡಿ, ಹಲವಾರು ಕಾಯಿಪಲ್ಯೆಗಳನ್ನು ಕೂಡಿಸಿ ಕುದಿಸಿ ಮಾಡಿ ಉಣ್ಣುವ ಬಜ್ಜಿ ಪಲ್ಲೆಯಂತೆ ರುಚಿಕಟ್ಟಾಗಿದೆ. ಸ್ವಾದಿಷ್ಟವಾಗಿದೆ.[೧೧] ಕವಿ, ಕಾವ್ಯ, ವಿಚಾರ, ಜೀವನಚಿತ್ರ, ಜಾನಪದ ಭಾಷೆ ಹಾಗೂ ವಿಜಾಪೂರ ಜಿಲ್ಲೆಯ ಸಮಸ್ಯೆ, ಸಹಕಾರ ಐತಿಹಾಸಿಕ ಘಟನೆಗಳು ಹೀಗೆ ಹಲವಾರು ವಿಷಯಗಳುಳ್ಳ ಲೇಖನ ಮಿಶ್ರಣ ಇಲ್ಲಿದೆ. ಕಾಡಸಿದ್ಧೇಶ್ವರಮಠ ಹಾಗೂ ಅಜ್ಜಶರಣ ಮರೆಮಿಂಡದೇವ ಇವೆರಡನ್ನೂ ಬಿಟ್ಟು ಉಳಿದ ಹತ್ತು ಲೇಖನಗಳು ವಿಜಾಪೂರ ಜಿಲ್ಲೆಗೆ ಸಂಬಂಧಿಸಿದವುಗಳಾಗಿದೆ. ನಾಲ್ಕೈದು ಪ್ರಬಂಧಗಳು ಡಾ. ವಾಲಿಯವರ ಒಲವಿನ ವಿಷಯಗಳಾದ ಜಾನಪದಕ್ಕೆ ಸಂಬಂಧಿಸಿವೆ.

'ರನ್ನಕವಿ ಕಾವ್ಯ' ಇದು ಕ್ರಿ.ಶ. ೧೯೭೫ ರಲ್ಲಿ ಮುಧೋಳದಲ್ಲಿ ಜರುಗಿದ ಅಖಿಲ ಭಾರತ ೬೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಪುಟಕ್ಕಾಗಿ ಬರೆದ ಲೇಖನವಾಗಿದ್ದು 'ರನ್ನಗನ್ನಡಿ' ಎಂಬ ಸಂಪುಟದಲ್ಲಿ ಆರಂಭದ ಲೇಖನವಾಗಿ ಮುದ್ರಣಗೊಂಡಿದೆ. ಕವಿ ರನ್ನನ ಜನನ, ಬಾಲ್ಯ, ಕೌಟುಂಬಿಕ ಹಿನ್ನಲೆ, ವೃತ್ತಿ ಮುಂತಾದ ವಿಷಯಗಳ ಕುರಿತು ಚರ್ಚೆ ಕಂಡು ಬರುತ್ತದೆ. ಮಹಾಕವಿ ರನ್ನನು ಬರೆದ 'ಅಜೀತನಾಥ ಪುರಾಣ', 'ಸಾಹಸಭೀಮವಿಜಯ' ಗ್ರಂಥಗಳ ಕುರಿತು ಬಹಳ ಮಹೋನ್ನತವಾದ ಲೇಖನ ಎನಿಸಿದೆ. 'ಸಾಹಸಭೀಮ ವಿಜಯ' (ಗದಾಯುದ್ಧ)ದ ಕೆಲವು ಆಶ್ವಾಸಗಳನ್ನು ಪರಿಚಯಿಸಿದ್ದಾರೆ. ಉದಾ : ಭೀಮಸೇನ ಪ್ರತಿಜ್ಞೆ, ರಣಾಂಗಣದಲ್ಲಿ ಸಂಜಯನೊಡನೆ ಸುಯೋಧನ, ವೃದ್ಧ ಹಾಗೂ ಕುರುಡ ದಂಪತಿಗಳು,

---

೧೧. ಲೇಖನ ಸಂಪದ : ಡಾ || ಎಂ.ಎಸ್. ವಾಲಿ ಪು.ಸಂ. ೪ ಪ್ರೊ.ಬಿ.ಬಿ. ನಾಡಗೌಡ ಅವರ ಮುನ್ನುಡಿಯಿಂದ ಪ್ರವರ್ಷ : ೨೦೦೦

ಮರುಳ್ಗಳ ಸಂದರ್ಭ, ಗುರು-ಕೆಳೆಯ-ಬಂಧುಬಾಂಧವರ ಅಂತಿಮ ದರ್ಶನ, ಭೀಷ್ಮರ ಸಂದರ್ಶನ, ವೈಶಂಪಾಯನ ಸರೋವರದ ಸಂದರ್ಭ, ಗುರುಪುತ್ರ ಸಂದರ್ಶನ ತುಂಬಾ ಸೊಗಸಾಗಿ ಚಿತ್ರಿತವಾದ ಆಶ್ವಾಸಗಳಾಗಿವೆ.

'ಶ್ರೀ ಕಾಡಸಿದ್ದೇಶ್ವರ ಮಠ' ಮಹಾದೇವ ಟ್ರಸ್ಟ ಕಮೀಟಿ ಬನಹಟ್ಟಿ ಇವರ ಆಶ್ರಯದಲ್ಲಿ ಶ್ರೀ ಕಾಡಸಿದ್ದೇಶ್ವರ ಕುರಿತು ವಿಚಾರ ಸಂಕಿರಣವನ್ನು ಶ್ರೀ ತಮ್ಮಣ್ಣಪ್ಪ ಚಿಕ್ಕೋಡಿ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯದಲ್ಲಿ ದಿನಾಂಕ : ೦೧, ೦೨, ಜನೇವರಿ ೧೯೯೫ ರಂದು ಇಟ್ಟುಕೊಳ್ಳಲಾಗಿತ್ತು. ಪೂಜ್ಯ ಶ್ರೀ ಸಿದ್ದೇಶ್ವರ ಮಹಾಸ್ವಾಮಿಗಳ ಸಾನಿಧ್ಯದಲ್ಲಿ ದಿನಾಂಕ : ೦೧-೦೧-೧೯೯೫ ರಂದು ಮಂಡಿಸಿದ ಪ್ರಬಂಧ ಇದಾಗಿದೆ. ಶ್ರೀ ಕಾಡಸಿದ್ದೇಶ್ವರ ಮಠದ ಇತಿಹಾಸ, ಶಿಲ್ಪಕಲೆ, ಆಚರಣೆ ಕುರಿತು ಸಮಗ್ರವಾದ ಮಾಹಿತಿಯನ್ನು ಈ ಲೇಖನ ಒದಗಿಸುತ್ತದೆ. ಈ ಮಠದ ಕುರಿತು ಸಂಶೋಧನೆ ನಡೆಸುವವರಿಗೆ ಮಾರ್ಗದರ್ಶಿ ಲೇಖನವಾಗಿದೆ.

'ರಾಜಕೀಯ ಮುತ್ಸದ್ದಿ' ದಿವಂಗತ ಶ್ರೀ ಬಿ.ಕೆ. ಗುಡದಿನ್ನಿ ಅವರ ಕುರಿತ ಲೇಖನವಾಗಿದೆ. ಅವರ ಸಂಸ್ಮರಣ ಗ್ರಂಥ 'ನಾಯಕ ರತ್ನ'ದಲ್ಲಿ ಈ ಲೇಖನ ಪ್ರಕಟವಾಗಿದೆ. ಬಿ.ಕೆ. ಗುಡದಿನ್ನಿಯವರ ಜನನ, ಬಾಲ್ಯ, ವಿದ್ಯಾಭ್ಯಾಸ, ಶಿಕ್ಷಕವೃತ್ತಿ, ರಾಜಕೀಯ ಪ್ರವೇಶ, ರಾಜಕೀಯದಲ್ಲಿ ಅವರ ಸ್ಥಾನಮಾನ, ಅವರು ತಮ್ಮ ಅಧಿಕಾರಾವಧಿಯಲ್ಲಿ ಕೈಗೊಂಡ ಕಾರ್ಯಗಳು ಮುಂತಾದ ವಿಷಯಗಳ ಮಾಹಿತಿ ಈ ಲೇಖನದಲ್ಲಿ ದೊರೆಯುತ್ತದೆ. ಡಾ. ಎಂ.ಎಸ್. ವಾಲಿಯವರ ಈ ಲೇಖನ ಸಮಾಜದ ಧೀಮಂತ ನಾಯಕರ ಬಗ್ಗೆ ಹೆಮ್ಮೆ, ಅಭಿಮಾನ ಹುಟ್ಟಿಸುವಲ್ಲಿ ಸಹಾಯಕಾರಿಯಾಗಿದೆ.

'ವಿಜಾಪೂರ ಜಿಲ್ಲೆಯ ಸಮಸ್ಯೆಗಳು' ಎಂಬ ಲೇಖನ 'ವ್ಯವಸಾಯ ಸೇವಾ ಸಹಕಾರಿ ಸಂಘ' ನಿ, ಇಂಗಳೇಶ್ವರ (ತಾ.ಬ. ಬಾಗೇವಾಡಿ)ದ ಸುವರ್ಣ ಮಹೋತ್ಸವದಲ್ಲಿ ದಿನಾಂಕ : ೧೦-೧೧-೧೯೯೭ ರಂದು ಮಂಡಿಸಲಾದ ಲೇಖನವಾಗಿದೆ. ಬಿಜಾಪೂರ ಜಿಲ್ಲೆಯ ಸಮಸ್ಯೆಗಳತ್ತ ಗಮನ ಸೆಳೆಯುವಲ್ಲಿ ಲೇಖನ ಪ್ರಭಾವಯುತವಾದುದಾಗಿದೆ. ಸಮಸ್ಯೆ ಸಮಸ್ಯೆಗಳಾಗಿಯೇ ಉಳಿಯದೆ, ಪರಿಹಾರದತ್ತ ಶ್ರಮಿಸಲು ವಾಲಿಯವರ ಈ ಲೇಖನ ಪ್ರೇರಣೆಯಾಗಿದೆ.

'ವಿಜಾಪೂರ ಜಿಲ್ಲೆಯಲ್ಲಿ ಸಹಕಾರಿ ಆಂದೋಲನ' ಮಂಡ್ಯ ನಗರದ ಚೌಡಯ್ಯ ಸ್ಮಾರಕ ಗ್ರಂಥಕ್ಕಾಗಿ ಹೇಳಿ ಬರೆಯಿಸಿದ ಲೇಖನ ಇದಾಗಿದೆ. ಕಾರಣಾಂತರಗಳಿಂದ ಅಂದು ಪ್ರಕಟಣೆಯನ್ನು ಕಾಣದ ಲೇಖನ ಈ ಸಂಪುಟದಲ್ಲಿ ಪ್ರಕಟಣೆಯಾಗಿದೆ. ಸಹಕಾರಿ ಆಂದೋಲನದ ಮಹತ್ವ ಅದರ ಯಶಸ್ವಿಯಾಗಲು ಅವುಗಳನ್ನು ಸರಿಯಾದ ರೀತಿಯಲ್ಲಿ ಅಧಿಕಾರಿಗಳು, ಸದಸ್ಯರು ರಕ್ಷಿಸಬೇಕು ಎಂದು ಹೇಳುವ ಮಾತು ಸಹಕಾರಿ ತತ್ವವನ್ನು ಮತ್ತಷ್ಟು

ಜಾಗೃತಗೊಳಿಸುತ್ತದೆ. ಈ ನಿಟ್ಟಿನಲ್ಲಿ ಈ ಲೇಖನ ನಿಸ್ವಾರ್ಥ ಮನೋಭಾವದ ಅವಶ್ಯಕತೆಯನ್ನು ಜನತೆಯಲ್ಲಿ ಮೂಡಿಸುತ್ತದೆ.

'ಗಡಿನಾಡ ಭಾಷಾ ವೈಶಿಷ್ಟ್ಯ' ಚಿಕ್ಕೋಡಿ ತಾಲೂಕಿನ ಗಡಿನಾಡ ಗಟ್ಟಿಕೇಂದ್ರ ಯಕ್ಸಂಬಾದಲ್ಲಿ ದಿನಾಂಕ : ೦೨-೧೧-೧೯೯೭ ರಂದು ಜರುಗಿದ ರಾಜ್ಯೋತ್ಸವ ಸಮಾರಂಭದಲ್ಲಿ ಮಂಡಿಸಿದ ಪ್ರಬಂಧವಾಗಿದೆ. ಮಾತೃ ಭಾಷೆಯನ್ನು ಪೋಷಿಸುವುದರ ಜೊತೆಗೆ ಎಲ್ಲ ಭಾಷೆಗಳನ್ನು ಪ್ರೀತಿಸಬೇಕಾದುದು ನಮ್ಮ ಕರ್ತವ್ಯವಾಗಿದೆ. ಹೀಗಾದಾಗ ಭಾಷಾ ದ್ವೇಷಕ್ಕೆ ಅವಕಾಶವೇ ಇರುವುದಿಲ್ಲ. ಎಲ್ಲರಲ್ಲಿಯೂ ಭಾಷಾ ಬಾಂಧವ್ಯವನ್ನು ಬೆಳೆಸಲು ಮೂಡಿಸಲು ಈ ಲೇಖನ ಪ್ರೇರಣೆಯಾಗಿದೆ.

'ಗರತಿಯ ಹಾಡುಗಳಲ್ಲಿ ಜೀವನದರ್ಶನ' ಇಂಡಿಯಲ್ಲಿ ಜರುಗಿದ ವಿಜಾಪೂರ ಜಿಲ್ಲಾ ೭ ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಿ : ೨೩-೦೧-೧೯೯೩ ರಂದು ಸಾದರಪಡಿಸಿದ ಪ್ರಬಂಧವಾಗಿದೆ. ಕನ್ನಡದ ಪ್ರಪ್ರಥಮ ಜಾನಪದ ಕಾವ್ಯಸಂಕಲನ 'ಗರತಿಯ ಹಾಡು' ಇದರ ಕುರಿತಾದ ಲೇಖನವಾಗಿದೆ. ಜನಪದರು ಸಂಪ್ರದಾಯಗಳ ಚೌಕಟ್ಟಿನಲ್ಲಿ ಹಸನಾದ ಬದುಕು ನಡೆಸಿದರು. ಅವರ ಜೀವನದರ್ಶನ ಮುಂದಿನವರಿಗೆ ದಾರಿದೀಪ ಈ ನಿಟ್ಟಿನಲ್ಲಿ ಈ ಲೇಖನ ತುಂಬ ಮಹತ್ವದ್ದಾಗಿದೆ.

'ಮಕ್ಕಳ ಪೀಡೆಯ ಹಾಡುಗಳು' ಈ ಲೇಖನ 'ಜಾನಪದ ಜಗತ್ತು' ಪತ್ರಿಕೆಗಾಗಿ ಬರೆದುದಾಗಿದೆ. ಸಂಪುಟ ೧೯ ಸಂಚಿಕೆ (ಎಪ್ರೀಲ್-ಜೂನ್ ೧೯೯೮) ರಲ್ಲಿ ಪ್ರಕಟಗೊಂಡಿದೆ. ಸಾಲು ದೀಪದ ಹಬ್ಬ (ದೀಪಾವಳಿ)ದ ಕಾಲದಲ್ಲಿ ಹಳ್ಳಿಯ ಹುಡುಗರು ದನಕರುಗಳಿಗೆ ಪೀಡೆ ಬರಬಾರದೆಂಬ ಆಶಯದಿಂದ ದೀಪಬೆಳಗಿ ಹಾಡುವ 'ಆಣಿಪೀಣಿ' ಹಾಡುಗಳ ಸಂಗ್ರಹವಾಗಿದೆ. ಉದಾಹರಣೆಗೆ : ಆಡು-ಕುರಿಗಳಿಗೆ ಆರತಿ ಬೆಳಗುವಾಗ ;

ಕುರಿಕಾಯುತ ಬಂದೇವಣ್ಣ
ಕುರುಬರ ಕೇರ್‍ಯಾಗ ಇಳಿದೇವಣ್ಣ
ಸಣ್ಣ ಶ್ಯಾವಿಗೆ ಬಸ್ತಾಳಣ್ಣ
ದಡಿಯ ದೋತರ ಹೊಚ್ಚಾಳಣ್ಣ
ಮುಂದು ಕುಂತು ಉಣಿಸ್ಯಾಳಣ್ಣ
ಹಿಂದ ಬಂದು ಒದ್ದಾಳಣ್ಣ ಆಣೀ ಪೀಣೆ [೧೨]

---

೧೨. ಲೇಖನ ಸಂಪದ : ಡಾ ॥ ಎಂ.ಎಸ್. ವಾಲಿ ಪು.ಸಂ. ೭೩ ಮುದ್ರಣ ವರ್ಷ ೨೦೦೦

. . . ಇಂತಹ ಹಾಡುಗಳು ಇಂದು ಮರೆಯಾಗುತ್ತಲಿವೆ. ದನಗಾಹಿ ಮಕ್ಕಳ ಸಂಖ್ಯೆ ಇಂದು ವಿರಳವಾಗುತ್ತಲಿದೆ. ವಿಜ್ಞಾನದ ಗಾಳಿಯಿಂದ ಇವು ಕಣ್ಮರೆಯಾಗುವ ಮೊದಲು ಇವನ್ನು ರಕ್ಷಿಸಬೇಕಾದುದು ಅವಶ್ಯಕವೆನಿಸಿದೆ. ಇಂತಹ ಸಂಗ್ರಹ ಕಾರ್ಯಕ್ಕೆ ವಾಲಿಯವರ ಈ ಲೇಖನ ದಿಕ್ಸೂಚಿಯಾಗಿದೆ.

'ಜಾನಪದ ಸಾಹಿತ್ಯದಲ್ಲಿ ಪ್ರಣಯ' : ಕನ್ನಡ ವೈದ್ಯಸಾಹಿತ್ಯ ಪರಿಷತ್ತು, ವಿಜಾಪೂರ ಜಿಲ್ಲಾ ಘಟಕದ ಪ್ರಥಮ ವಾರ್ಷಿಕೋತ್ಸವದಲ್ಲಿ ದಿನಾಂಕ : ೨೭-೦೯-೧೯೯೭ ರಂದು ಮಂಡಿಸಿದ ಪ್ರಬಂಧವಾಗಿದೆ. ಈ ಲೇಖನವು ೧೯೯೭ ರ ಸೆಪ್ಟಂಬರ್‌ದ 'ಆದರ್ಶ ಗಂಡ-ಹೆಂಡತಿ' ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ನಿಸರ್ಗದ ಮಡಿಲಲ್ಲಿ ಹಗಲಿರುಳು ಶ್ರಮಿಸುವ ರೈತನ ರಸಿಕತನವನ್ನು ಹೇಳುವ ಲೇಖನ ಇದಾಗಿದೆ.

'ದೊಡ್ಡಾಟ (ಬಯಲಾಟ)ದ ಭಾಷೆ: ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು ಮತ್ತು ವಾತ್ಸಲ್ಯ ವಿಚಾರ ವೇದಿಕೆ ಬನಹಟ್ಟಿ ಸಹಯೋಗದಲ್ಲಿ ಬನಹಟ್ಟಿ ನೆರೆಯ ರಾಮಪುರದಲ್ಲಿ ದಿನಾಂಕ : ೨೭, ೨೮ ಅಕ್ಟೋಬರ್ ೧೯೯೩ ರಂದು ಜರುಗಿದ ವಿಜಾಪೂರ ಜಿಲ್ಲಾ ಜಾನಪದ ಉತ್ಸವದಲ್ಲಿ ದಿನಾಂಕ : ೨೮ ರಂದು ಓದಿದ ಪ್ರಬಂಧ ಇದಾಗಿದೆ. ಲಕ್ಷ್ಮೀ ಕಲ್ಯಾಣ, ರಾಜಾ ಹರಿಶ್ಚಂದ್ರ, ತಾರಕಾಸುರ ಹಸ್ತ ಪ್ರತಿಗಳಿಂದ ಹಾಗೂ ವೀರಭೀಮಾರ್ಜುನ ಎಂಬ ಮುದ್ರಿತ ಕೃತಿಯಿಂದ ಉದಾಹರಣೆಗಳನ್ನು ಬಳಸಿಕೊಂಡು ದೊಡ್ಡಾಟ (ಬಯಲಾಟ) ಭಾಷೆಯ ಬಗ್ಗೆ ಸುದೀರ್ಘವಾದ ಚರ್ಚೆಯನ್ನು ಕಾಣುತ್ತೇವೆ. ದೊಡ್ಡಾಟದ ಭಾಷೆ ಬಹಳ ಕ್ಲಿಷ್ಟ ಮತ್ತು ವೈವಿಧ್ಯಮಯವಾಗಿದೆ. ಅದರ ಅಧ್ಯಯನ ನಡೆಸುವವರಿಗೆ ಈ ಲೇಖನ ಮಾದರಿಯಾಗಿದೆ.

'ಅಚ್ಚ ಶರಣ ಮರೆಮಿಂಡದೇವ'ಕೊಪ್ಪಳ ಜಿಲ್ಲಾ ಶರಣ ಸಾಹಿತ್ಯ ವೇದಿಕೆಯು ಕೊಪ್ಪಳ ತಾಲೂಕಿನ ಕಾತರಕಿ ಗ್ರಾಮದಲ್ಲಿ ದಿನಾಂಕ : ೧೯-೧೧-೧೯೯೯ ರಂದು ಏರ್ಪಡಿಸಿದ ಕಾರ್ಯಕ್ರಮದಲ್ಲಿ ವಾಲಿಯವರು ಮಾತನಾಡಿದ್ದರು. ಅದನ್ನೇ ಲೇಖನವಾಗಿ ಪ್ರಕಟಿಸಲಾಗಿದೆ. ಇದು ಅಜ್ಞಾತ ಶರಣನೊಬ್ಬನ ಚರಿತ್ರೆಯಾಗಿದೆ. ಅಪರೂಪದ ಶರಣನ ಪರಿಚಯವನ್ನು ಒಂದು ಚಿಕ್ಕ ಲೇಖನದ ಮುಖಾಂತರ ವಾಲಿಯವರು ಮಾಡಿಕೊಟ್ಟಿದ್ದಾರೆ.

'ವಿಜಾಪೂರ ಜಿಲ್ಲೆಯ ಐತಿಹಾಸಿಕ ಘಟನೆಗಳು' ಲೇಖನ ಸಂಪದ ಕೃತಿಯ ಕೊನೆಯ ಲೇಖನ ಸಂಗ್ರಹವಾಗಿದೆ. ಇದು ವಿಜಾಪೂರ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಬರೆಸಿದ ಫಲಕಗಳ ಆಧಾರದಿಂದ ಬರೆದು ಪ್ರಕಟಿಸಿದ ಲೇಖನವಾಗಿದೆ.

**ಕೃಷಿ ಜಾನಪದ :**

ಬೀದರಿನಲ್ಲಿ ನಡೆದ ಅಖಿಲ ಭಾರತ ೭೨ ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸಲು ತೀರ್ಮಾನಿಸಿದ ಸಂದರ್ಭದಲ್ಲಿ ಅಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಪ್ರೊ.ಚಂದ್ರಶೇಖರ ಪಾಟೀಲ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸುತ್ತಿದ್ದರು. ಚಂಪಾರವರು ಈ ಸಮ್ಮೇಳನದ ಸವಿನೆನಪಿಗಾಗಿ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವ ಕಾರ್ಯ ಕೈಗೆತ್ತಿಕೊಂಡರು. ಆಗ ಚಂದ್ರಶೇಖರ ಪಾಟೀಲರು 'ಕೃಷಿ ಜಾನಪದ'ದ ಕುರಿತು ಒಂದು ಗ್ರಂಥ ಬರೆದು ಕೊಡುವ ಹೊಣೆಯನ್ನು ಡಾ. ಎಂ.ಎಸ್. ವಾಲಿಯವರಿಗೆ ಹೊರಿಸಿದರು. ವಾಲಿಯವರಿಗೋ ಜಾನಪದ ಕ್ಷೇತ್ರ ತುಂಬ ಪ್ರಿಯವಾದುದು. ಈಗಾಗಲೇ ಜಾನಪದ ಕ್ಷೇತ್ರದಲ್ಲಿ ವಾಲಿಯವರು ಸಾಕಷ್ಟು ಕಾರ್ಯ ಮಾಡಿರುವುದರಿಂದ ಈ ಜವಾಬ್ದಾರಿಯನ್ನು ಮೌನವಾಗಿ ಒಪ್ಪಿಕೊಂಡು ಕೃಷಿಗೆ ಸಂಬಂಧಿಸಿದ 'ಕೃಷಿ ಜಾನಪದ'. ೨೦೦೬ ರಲ್ಲಿ ಪ್ರಥಮ ಮುದ್ರಣ ಕಂಡಿತು. ಬೀದರಿನಲ್ಲಿ ನಡೆದ ಅಖಿಲ ಭಾರತ ೭೨ ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಟಣೆಯಾಯಿತು.

ನಮ್ಮದು ಕೃಷಿ ಪ್ರಧಾನವಾದ ದೇಶ. ಈ ಮಾತು ನಮ್ಮ ನಾಡಿಗೂ ಅನ್ವಯಿಸುವುದು. ಪ್ರತಿಶತ ೮೦ ರಷ್ಟು ಜನರು ಬೇಸಾಯವನ್ನೇ ಅವಲಂಬಿಸಿ ಬದುಕುತ್ತಿದ್ದಾರೆ. 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಮೇಲು'. 'ಕೃಷಿಯಿಂದ ಋಷಿ'. 'ಕೈಕೆಸರಾದರೆ ಬಾಯಿ ಮೊಸರು', 'ಒಕ್ಕಲಿಗನೊಕ್ಕದಿರೆ ಬಿಕ್ಕುವುದು ಜಗವೆಲ್ಲ'. ಮುಂತಾದ ಮಾತುಗಳಿಂದ ಕೃಷಿಯ ಮಹತ್ವವನ್ನು ಎತ್ತಿ ಹೇಳುತ್ತೇವೆ. ಜಾನಪದಕ್ಕೂ ಕೃಷಿಗೂ ಅವಿನಾಭಾವ ಸಂಬಂಧವಿದೆ. ಕೃಷಿ ಸಂಸ್ಕೃತಿ ನಶಿಸಿದರೆ ಉಳಿಗಾಲವಿಲ್ಲ ಎಂಬಂತೆ ಡಾ. ಎಂ.ಎಸ್. ವಾಲಿಯವರು ಭೂಮಿತಾಯಿ, ಮಳೆಗಾಳಿ, ಪಶು ಸಂಪತ್ತು, ಕೃಷಿ ಉಪಕರಣಗಳು, ಸುಗ್ಗಿಯ ಸೊಬಗು, ರೈತನ ನಂಬಿಗೆ- ಸಂಪ್ರದಾಯಗಳು, ಕೃಷಿಕರ ತತ್ವಸಿದ್ಧಾಂತಗಳು, ಜಾನಪದ ಸಂಸ್ಕೃತಿ ಎಂಬ ಶೀರ್ಷಿಕೆಗಳಡಿಯಲ್ಲಿ ಕೃಷಿ ಮತ್ತು ಜಾನಪದದ ಮಹತ್ವ ಮತ್ತು ಸಂಬಂಧವನ್ನು ವಿಶ್ಲೇಷಿಸಿದ್ದಾರೆ.

'ಭೂಮಿತಾಯಿ' 'ಕೃಷಿಜಾನಪದ'ದ ಮೊದಲ ಅಧ್ಯಾಯವಾಗಿದೆ. 'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ ಎಂಬ ತ್ರಿಪದಿಯ ಮೂಲಕ ಭೂಮಿತಾಯಿಯ ಮೇಲೆ ಕೃಷಿಕನಿಗಿರುವ ಕೃತಜ್ಞತಾ ಭಾವವನ್ನು ಎತ್ತಿ ತೋರಿಸಿದ್ದಾರೆ. 'ಜಮೀನು ಎಂದರೆ ಜವರಾಯನೂ ಎದ್ದು ಕುಳಿತ' ಎಂಬ ಹೊಸಗಾದೆ ನಿರ್ಮಿಸುವಷ್ಟರ ಮಟ್ಟಿಗೆ ಕೃಷಿಕರಿಗೆ ಭೂವ್ಯಾಮೋಹ. ಮಣ್ಣಿನ ವ್ಯಾಮೋಹದ ಕುರಿತ ಹಲವು ತ್ರಿಪದಿಗಳು, ಚೌಪದಿಗಳ, ಮೂಲಕ ಬಣ್ಣಿಸಿದ್ದಾರೆ. ಮಣ್ಣಿನ ಕೊನೆಯ ಪೂಜೆ. ಸೀಗೆ ಪೂಜೆ ಇದನ್ನು ಕೋಲುಪದಗಳ ಮುಖಾಂತರ ಬಣ್ಣಿಸಿದ್ದಾರೆ.

ಮಳೆಯೇ ಜಗತ್ತಿಗೆ ಆಧಾರ, ಜೀವನಕ್ಕೆ ದಾರಿ. ಮಳೆಯಿಲ್ಲದೆ ಬೆಳೆಯು ಬರುವುದಿಲ್ಲ. ಬೆಳೆಯಿಲ್ಲದೆ ಬಾಳೇ ಇಲ್ಲ ಮಳೆರಾಯನ ಕೃಪೆ ತೋರಿಸಿ ಕಾಲಕಾಲಕ್ಕೆ ಭೂಮಿಗಿಳಿದರೆ ರೈತನ ಬಾಳು ಬಂಗಾರವಾಗುತ್ತದೆ. ಮಳೆರಾಯ ಮುನಿದರೆ ಅತಿವೃಷ್ಠಿ ಅನಾವೃಷ್ಠಿಗಳೆರಡೂ ಸಂಭವಿಸಬಹುದು. ಅಂತೆಯೇ 'ಯಾರಿಚ್ಛೆ ಹೇಳು ಮಳೆರಾಯ ಶಿವನೇ ತನ್ನಿಚ್ಛೆ ಬಂದಲ್ಲಿ ಸರಿಯುವನು' ಎಂಬ ಮಾತು ಸತ್ಯವಾಗಿದೆ ಮಳೆ–ಗಾಳಿಯ ಮಹತ್ವವನ್ನೂ ಎರಡನೇ ಅದ್ಯಾಯದಲ್ಲಿ ಕಾಣುತ್ತೇವೆ. ಮಳೆಬಾರದಿದ್ದಾಗ ಮಳೆರಾಯನನ್ನು ಒಲಿಸಿಕೊಳ್ಳುವ ಆರಾಧನೆಗಳು ಹತ್ತು ಹಲವು. ಅವುಗಳ ಸಂಕ್ಷಿಪ್ತ ವಿವರಣೆ ಇಲ್ಲಿ ಕಂಡು ಬರುತ್ತದೆ. ವಾರ ಮಾಡುವುದು, ಕುಮಾರವ್ಯಾಸ ಭಾರತ ಪಠಣ ಮಾಡುವುದು, ಸಪ್ತಾಹ ಕೈಗೊಳ್ಳುವುದು, ಡೊಳ್ಳಿನ ವಾಲಗ ಕೂಡಿಸುವುದು, ಹೂಳಿದ್ದ ತೊನ್ನು ಹೆಣ ತೆಗೆಯುವುದು, ಪ್ರಸ್ತ ಹಾಕಿಸುವುದು, ಬಾಯಿ ಮೇಲಾಗಿ ಹುಟ್ಟದವರ ಸೇವೆ ಮಾಡುವುದು, ಕುರುಬ ಕಂಬಳಿ ಬೀಸುವುದು, ತಪಸ್ಸು ಕೈಗೊಳ್ಳುವುದು, ಕಾಯಿ ಕಟ್ಟುವುದು, ನೀರು ಕಟ್ಟುವುದು ಮುಂತಾದ ಆರಾಧನೆಗಳ ವಿವರಣೆ ಇಲ್ಲಿ ಕಂಡು ಬರುತ್ತದೆ. ರೈತ ಮಳೆಗಾಳಿ ಕುರಿತು ಇಟ್ಟಿರುವ ನಂಬಿಕೆಗಳನ್ನು ಸಂಗ್ರಹಿಸಿದ್ದಾರೆ. ಮಳೆಗಾಳಿಗೆ ಸಂಬಂಧಿಸಿದ ತ್ರಿಪದಿಗಳೂ ಸಂಗ್ರಹಗೊಂಡಿವೆ.

'ದನ ದ್ರವ್ಯ ಅಲ್ಲ' ಎಂಬುದನ್ನೂ ರೈತರು ಚೆನ್ನಾಗಿ ಅರಿತಿದ್ದರೂ ದನಗಳೊಡನೆ ಅವರ ಅವಿನಾಭಾವ ಸಂಬಂಧ ಅನಂತ, ಅಪೂರ್ವವಾಗಿದೆ. ಇಂತಹ ಸಂಬಂಧವನ್ನೂ ರೈತ ಮತ್ತು ಪಶು ಸಂಪತ್ತಿನ ಮಧ್ಯೆ ಕಾಣುತ್ತೇವೆ. ಪಶುಪಾಲನೆ, ಅದರ ಮಹತ್ವ, ಪೂಜೆ ಪುರಸ್ಕಾರ, ಮುಂತಾದವುಗಳನ್ನು ಕೆಲವು ಪದ್ಯಗಳ ಮುಖಾಂತರ ಮೂರನೆಯ ಅಧ್ಯಾಯದಲ್ಲಿ ಹೇಳಿದ್ದಾರೆ. ದನಗಳ ಸುಳಿ, ಇರುವ ಸ್ಥಳ, ಶುಭಾಶುಭಲಕ್ಷಣ, ದನಗಳ ರೋಗಗಳು ಹಾಗೂ ಚಿಕಿತ್ಸೆ ಬಗ್ಗೆ ವಿವರಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ 'ಕೃಷಿ ಉಪಕರಣಗಳು' ಕುರಿತಾದ ವಿಷಯವಿದೆ. ಚಕ್ಕಡಿ, ಈಸು, ನೊಗ, ನೇಗಿಲು, ಕುಂಟೆದಿಂಡು, ಕೂರಿಗೆ, ಗುದ್ಲಿ, ಅಂಟ, ಮೇಟಿ, ಸವಾರಿ, ಗ್ವಾರಿ, ರಾಗೋಲ, ಬ್ಯಾಕಟ್ಟಿಗೆ ಮುಂತಾದ ಕಟ್ಟಿಗೆ ಉಪಕರಣಗಳು, ಕಬ್ಬಿಣದ ಉಪಕರಣಗಳು, ನಾರಿನ ಉಪಕರಣಗಳು, ತೊಗಲಿನ ಉಪಕರಣಗಳ ಮಾಹಿತಿಯನ್ನೂ ಕೊಟ್ಟಿದ್ದಾರೆ.

ಕೃಷಿಯಲ್ಲಿ ಮುಖ್ಯವಾಗಿ ಮೂರು ಉಪಕ್ರಮಗಳನ್ನು ಗುರುತಿಸುತ್ತೇವೆ. ಉಳುಮೆ, ಬಿತ್ತಿಗೆ, ಸುಗ್ಗಿ ಎಂದು ಸುಗ್ಗಿಯ ಬಗ್ಗೆ 'ಸುಗ್ಗಿಯ ಸೊಬಗು' ಶೀರ್ಷಿಕೆಯಲ್ಲಿ ವರ್ಣನೆಗೊಂಡಿದೆ. ರೈತ ಉಳುಮೆ ಮಾಡಿ, ಕಾಳನ್ನು ಬಿತ್ತಿ ಬೆಳೆದು ಬೆಳೆಯನ್ನು ತೆಗೆದು ಕಣ ಮಾಡಿ ರಾಶಿಯನ್ನು ಮಾಡುತ್ತಾನೆ. ಲೇಖಕರು ಇಲ್ಲಿ ಕಣ ಮಾಡುವ ವಿಧಾನ, ರಾಶಿ ಮಾಡುವ ವಿಧಾನವನ್ನೂ

ಸುಂದರವಾಗಿ ವರ್ಣಿಸಿದ್ದಾರೆ. ರಾಶಿ ಮಾಡುವ ಸಂದರ್ಭದಲ್ಲಿ ಹಂತಿ ಕಟ್ಟಿ ಹಾಡುವ ವಿಧಾನ ನಮ್ಮ ಕೃಷಿಕರಲ್ಲಿತ್ತು. ಹಂತಿ ಸಾಗಿರುವಾಗ ನಡು ನಡುವೆ ಎತ್ತುಗಳನ್ನು ನಿಲ್ಲಿಸಿ ಕಂಕಿಯನ್ನು ತೆಗೆಯಬೇಕಾಗುವುದು. ಆಗಲೂ ಹಾಡುಗಳಲ್ಲಿ ವಿರಾಮವಿಲ್ಲ. ಆ ಬಂಧ ಮಾತ್ರ ಭಿನ್ನವಾಗಿ ಅವಸರವಾಗಿ ಸಾಗುತ್ತದೆ. ಎರಡು ಗುಂಪುಗಳಾಗಿ ಪ್ರಶ್ನೋತ್ತರ ರೀತಿಯಲ್ಲಿ ಹಾಡು ನಡೆಯುತ್ತದೆ ಅದನ್ನು ಉದಾಹರಣೆ ಸಹಿತ ವಾಲಿಯವರು ಹೇಳಿದ್ದಾರೆ. ಉದಾಹರಣೆಗೆ :

ಹಂತಿಯ ಹೊಡೆಯವಗ ಏನೇನ ಜ್ಯಾಜೋ ॥
ಕರಿಕಟ್ಟಿದ ಕಂಬಳಿ ಕಾಲಾಗ ರುಳಿಯೋ ॥
ಕಂಕಿಯ ತೆಗೆಯವಗ ಏನೇನ ಚಾಜೋ ॥
ಹೊನ್ನಿನ ಸಡ್ಡ ಚೆನ್ನದ ರಾಗೋಲೋ [೧೩]

ಹೀಗೆ ಹಲವಾರು ಹಾಡುಗಳನ್ನು ಲೇಖಕರು ಉದಾಹರಿಸಿದ್ದಾರೆ.

ರೈತನ ನಂಬಿಗೆ-ಸಂಪ್ರದಾಯಗಳು ಕೂಲಂಕುಷ ತಿಳುವಳಿಕೆಗಳು ಇಲ್ಲಿ ಅಡಕವಾಗಿವೆ. ಅಮವಾಸ್ಯೆಯ ದಿನ ದೆವ್ವಗಳು ಬರುತ್ತವೆ. ದಕ್ಷಿಣೆ ಕೊಡದೇ ತೀರ್ಥ ತೆಗೆದುಕೊಳ್ಳಬಾರದು. ಪಾದರಕ್ಷೆ ಧರಿಸಿ ಗಂಗೆಯಲ್ಲಿ ಹೋಗಬಾರದು. ಶಿವರಾತ್ರಿಯ ದಿನ ಶಿವನ ದರ್ಶನ ಮಾಡದಿದ್ದರೆ ಕತ್ತೆಯ ಜನ್ಮ ಬರುತ್ತದೆ ಎಂಬ ಅಮಾನುಷ ನಂಬಿಕೆಗಳ ಬಗ್ಗೆ ಹೇಳಿದ್ದಾರೆ. ತೆಂಗಿನಿಂದ ಬಡತನ ಹಿಂಗುತ್ತದೆ. ಸೇಂಗಾ ಬಿತ್ತಿದವ ಮಂಗ್ಯಾ ಅಂತ ಇತ್ಯಾದಿ. ಗಿಡಮರಗಳನ್ನು ಕುರಿತ ನಂಬಿಕೆಗಳನ್ನು ಇಲ್ಲಿ ಕಾಣುತ್ತೇವೆ. ಉದಾಹರಣೆಗೆ : ಎಕ್ಕೆ ಗಿಡ ಇಲ್ಲವೆ ಬನ್ನಿ ಮರ ಇದ್ದಲ್ಲಿ ಕಣ ಮಾಡಬೇಕು. ನುಗ್ಗೆ ಗಿಡವನ್ನು ಮನೆಯ ಅಂಗಳ ಹಾಗೂ ಹಿತ್ತಲಲ್ಲಿ ಬೆಳೆಸಬಾರದು. ಬನ್ನಿ ಗಿಡ ಇದ್ದಲ್ಲಿ ಬಾವಿ ತೋಡಿದರೆ ನೀರು ನಿಶ್ಚಿತ. ಬಂಜೆಯರು ಎಕ್ಕೆ ಗಿಡ ಪೂಜಿಸಿದರೆ ಮಕ್ಕಳಾಗುತ್ತವೆ. ಜೊತೆಗೆ ತಿಥಿ. ವಾರ. ನಕ್ಷತ್ರ. ಹಬ್ಬ ಹುಣ್ಣಿಮೆ. ದಿಕ್ಕು-ದೆಸೆ ಕುರಿತಾದ ಕೃಷಿಕರಲ್ಲಿರುವ ನಂಬಿಕೆಗಳನ್ನು ವಾಲಿಯವರು ವಿವರಿಸಿದ್ದಾರೆ. ಒಟ್ಟಿನಲ್ಲಿ ಜನಪದ ನಂಬಿಕೆಗಳು ಇಂದಿಗೆ ಪ್ರಸ್ತುತವೋ ಅಲ್ಲವೋ ಎನ್ನುವುದನ್ನೂ ವೈಜ್ಞಾನಿಕ ತಳಹದಿಯ ಮೇಲೆ ಆಲೋಚಿಸಿ ಅದರಂತೆ ನಡೆಯಲು ಈ ವಿವರಣೆ ಸಹಾಯ ಮಾಡುತ್ತದೆ.

'ಕೃಷಿಕರ ತತ್ವ ಸಿದ್ಧಾಂತಗಳು'. ಕೃಷಿಕರು ಹುಟ್ಟಿನಿಂದ ಮುಗ್ಧರೂ. ಸರಳ ಸ್ವಭಾವದವರೂ ಆಗಿದ್ದಾರೆ. ಶ್ರಮಜೀವಿಗಳು ಮತ್ತು ಪ್ರಕೃತಿ ಪ್ರೇಮಿಗಳೆನಿಸಿದ್ದಾರೆ. ಇವರು ತಮ್ಮದೇಯಾದ ತತ್ವ-ಸಿದ್ಧಾಂತಗಳನ್ನೂ ಹೊಂದಿದ್ದಾರೆ. ದೈವಭಕ್ತಿ. ಕಾಯಕ ಸಿದ್ಧಾಂತ. ದಯೆ.

---

೧೩. ಕೃಷಿ ಜಾನಪದ : ಡಾ ॥ ಎಂ.ಎನ್. ವಾಲಿ ಪು.ಸಂ. ೫೨ ಮುದ್ರಣ ವರ್ಷ ೨೦೦೬

ದಾಸೋಹ, ಮುಂತಾದವು ಪ್ರಮುಖವಾಗಿವೆ. ಇವುಗಳಿಗೆ ಸಂಬಂಧಿಸಿದಂತೆ ತ್ರಿಪದಿಗಳ ಮೂಲಕ ಡಾ ॥ ಎ.ಎನ್. ವಾಲಿಯವರು ವೈಶಿಷ್ಟ ಪೂರ್ಣವಾಗಿ ವಿಶ್ಲೇಷಿಸಿದ್ದಾರೆ ಹಾಗೂ ಗಾದೆ ಮಾತುಗಳನ್ನು ಕೊನೆಗೆ ಸಂಗ್ರಹಿಸಿದ್ದಾರೆ.

ಕೃಷಿ ಜಾನಪದದ ಕೊನೆಯ ಅಧ್ಯಾಯ 'ಜಾನಪದ ಸಂಸ್ಕೃತಿ'. ಕೃಷಿ ಜಾನಪದ ಸಂಸ್ಕೃತಿಯನ್ನು ಕುರಿತು ಚೆನ್ನಾಗಿ ಹೇಳಿದ್ದಾರೆ. ಒಟ್ಟಾರೆ ರೈತನು ಜಗತ್ತಿನ ಅನ್ನದಾತ ಎಂಬುದನ್ನೂ ಚೆನ್ನಾಗಿ ಹೇಳಿದ್ದಾರೆ. ಕೃತಿಯ ಕೊನೆಗೆ ಅನುಬಂಧದಲ್ಲಿ ಆಧ್ಯಾತ್ಮ ಕೃಷಿ, ಹೊಸಾಹೊಲ ಮಾಡಬೇಕು, ತತ್ವಪದ, ಬಿತ್ತುವ ಶಕುನ, ಹಂತಿಯಲ್ಲಿ ಮೇದಾರ ಕೇತಯ್ಯನ ಹಾಡು', ಎಂಬ ಪದ್ಯಗಳ ಸಂಗ್ರಹ ಕಂಡು ಬರುತ್ತದೆ. ಒಟ್ಟಿನಲ್ಲಿ ಡಾ ॥ ಎಂ.ಎನ್. ವಾಲಿಯವರು ಕೃಷಿಗೆ ಸಂಬಂಧಿಸಿದ ಜಾನಪದರ ಬದುಕಿನ ಸಂಗತಿಗಳನ್ನು ಈ ಕೃತಿಯಲ್ಲಿ ದಾಖಲಿಸುವ ಪ್ರಯತ್ನ ಮಾಡಿದ್ದಾರೆ.

# ಅಧ್ಯಾಯ ೫.

## ವಿಜಾಪೂರ ಜಿಲ್ಲೆಯ ಕಲೆ ಕಲಾವಿದರು ಕಥಾಗುಚ್ಛ

## ಅಧ್ಯಾಯ ೫

## ವಿಜಾಪೂರ ಜಿಲ್ಲೆಯ ಕಲೆ, ಕಲಾವಿದರು, ಕಥಾಗುಚ್ಛ

ಉತ್ತರ ಕರ್ನಾಟಕದ ಬಯಲು ಸೀಮೆಯೆಂದೇ ಹೆಸರು ಪಡೆದ ವಿಜಾಪೂರ ಜಿಲ್ಲೆಯಿಂದಲೇ ಜನಪದ ಸಾಹಿತ್ಯದ ತಲಸ್ಪರ್ಶಿಯಾದ ಅಧ್ಯಯನ ಪ್ರಾರಂಭವಾದುದು ಈಗ ಇತಿಹಾಸವಾಗಿದೆ. ಹಲಸಂಗಿಯ ಗೆಳೆಯರ ಮೂಲಕ ೨೦ ನೇ ಶತಮಾನದ ನಾಲ್ಕನೆಯ ದಶಕದಲ್ಲಿ 'ಗರತಿಯ ಹಾಡು', 'ಜೀವನ ಸಂಗೀತ', 'ಮಲ್ಲಿಗೆ ದಂಡೆ' ಎಂಬ ಮೂರು ಮೌಲಿಕ ಸಂಕಲನಗಳು ಹೊರಬಂದು ಜನಪದ ಸಾಹಿತ್ಯದ ಅಧ್ಯಯನಕ್ಕೆ ನಾಂದಿ ಹಾಡಿದವು. ಈ ಮಾದರಿಯಲ್ಲಿಯೇ ಇಂದಿಗೂ ಜಿಲ್ಲೆಯ ಜನಪದ ಸಾಹಿತ್ಯದ ಅಧ್ಯಯನಗಳು ಸಾಗುತ್ತಾ ಬಂದಿವೆ. ವಿಜಾಪೂರ ಜಿಲ್ಲೆಯ ಜನಪದ ಕಲೆ, ಸಾಹಿತ್ಯ, ಕಥಾಸಾಹಿತ್ಯ ತುಂಬ ವೈಶಿಷ್ಟಪೂರ್ಣವಾಗಿವೆ. ವೈವಿಧ್ಯಮಯವಾಗಿವೆ. ಇಲ್ಲಿಯ ಜನಪದ ಕಲೆಗಳಲ್ಲಿ ಸಾಹಿತ್ಯ ಕಲೆ, ಸಂಸ್ಕೃತಿಯ ಸಮ್ಮಿಲನದ ಮುಪ್ಪುರಿಯಿದೆ. ಸೃಜನಾತ್ಮಕ ಸಾಹಿತ್ಯ, ಕಲೆಗಳಿಗೆ ಮತ್ತು ಕಲಾವಿದರಿಗೆ ಆಧುನಿಕತೆಯ ಗಂಡುಗಾಳಿಯಿಂದ ಗ್ರಹಣ ಬಡಿದು ಕೆಲವೊಂದು ಸಾಹಿತ್ಯ ಮತ್ತು ಕಲೆಗಳು ಹೇಳ ಹೆಸರಿಲ್ಲದಂತಾಗುತ್ತಿವೆ. ನಾಟಕ, ಸಂಗೀತ, ಚಲನಚಿತ್ರಗಳ ಕಾರಣವಾಗಿ ಕೆಲವು ಕಲೆ ಸಾಹಿತ್ಯ ಕೊಚ್ಚಿ ಹೋಗುತ್ತಿವೆ. ಕಲಾವಿದರು ಮೂಲೆಗುಂಪಾಗುತ್ತಿದ್ದಾರೆ. ಕಾರಣ ಉಳಿದವುಗಳನ್ನಾದರೂ ರಕ್ಷಿಸದಿದ್ದರೆ ಈ ಅಮೂಲ್ಯ ಸಂಪತ್ತು ಉಳಿಯಲಾರದು. ಅದಕ್ಕಾಗಿ ನಾವು ನಾಳೆ ಎನ್ನದೇ ಈ ಕಾರ್ಯಕ್ಕೆ ತೊಡಗಬೇಕಾಗಿದೆ. ಈ ನಿಟ್ಟಿನಲ್ಲಿ ಡಾ.ಎಂ.ಎಸ್. ವಾಲಿಯವರು ಜನಪದ ಕಲೆ, ಕಥಾಸಾಹಿತ್ಯ, ಕಲಾವಿದರ ನೆನಹುಗಳನ್ನು ಉಳಿಸುವುದರ ಸಲುವಾಗಿ ಶ್ರಮವಹಿಸಿ ರಚಿಸಿದ ಸಾಹಿತ್ಯ ಇದಾಗಿದೆ. ವಿಜಾಪೂರ ಜಿಲ್ಲೆಯ ಜನಪದ ಕಲೆ-ಕಲಾವಿದರು ಮತ್ತು ಕಥಾಸಾಹಿತ್ಯದ ಪರಿಚಯವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಿಕೊಡಲಾಗಿದೆ.

**'ವಿಜಾಪೂರ ಜಿಲ್ಲೆಯ ಜನಪದ ಕಲೆ-ಕಲಾವಿದರು'** ಎಂಬ ಕೃತಿ ಕರ್ನಾಟಕ ಜಾನಪದ ಪರಿಷತ್ತು ಪ್ರಾರಂಭಿಸಿದ 'ಜಾನಪದ ಪುಸ್ತಕ ಮಾಲೆ'ಗೆ ಡಾ.ಎಂ.ಎಸ್.ವಾಲಿಯವರು ಬರೆದು ಕೊಟ್ಟಿರುವ ಕಿರು ಹೊತ್ತಿಗೆಯಾಗಿದೆ. ೨೦೦೮ ರಲ್ಲಿ ಪ್ರಥಮ ಮುದ್ರಣ ಕಂಡಿತು. ವಿಜಾಪೂರ ಜಿಲ್ಲೆಯ ಜನಪದ ಕಲೆಗಳು ಹಾಗೂ ಆಯಾ ಕಲೆಗಳ ಪ್ರಮುಖ ಕಲಾವಿದರನ್ನು ಈ ಪುಟ್ಟ ಕೃತಿಯಲ್ಲಿ ಪರಿಚಯಿಸಲಾಗಿದೆ. ದೈವೀ ಆರಾಧನೆಯ ಕಲೆಗಳು, ವಾದ್ಯ ಪ್ರಧಾನ ಕಲೆಗಳು, ಗೀತ ಪ್ರಧಾನ ಕಲೆಗಳು, ಕುಣಿತ ಪ್ರಧಾನ ಕಲೆಗಳು, ಸಮ್ಮಿಶ್ರ ಕಲೆಗಳು ಎಂಬುದಾಗಿ ವಿಭಜಿಸಿ ಆಯಾ ವಿಭಾಗದಲ್ಲಿ ಬರುವ ಕಲೆಗಳನ್ನು ಹಾಗೂ ಕಲಾವಿದರನ್ನು ಪರಿಚಯಿಸಿಕೊಡುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ದೈವೀ ಆರಾಧನೆಯ ಕಲೆಗಳು :**

ದೈವಾರಾಧನೆಯ ಕಲೆಗಳಲ್ಲಿ ಭಜಿಸಿ, ವೀರಗಾಸೆ, ಗೊಂದಲಿಗರ ಮೇಳ, ಚೌಡಿಕೆ ಕಲೆಗಳು ಕಂಡು ಬರುತ್ತವೆ. ದೈವಾರಾಧನೆಯಲ್ಲಿ ಭಜನೆಗೆ ವಿಶಿಷ್ಟ ಸ್ಥಾನವಿದೆ. ದೇವರನ್ನು ಕುರಿತು ಭಕ್ತಿಯಿಂದ ಹಾಡುವ ಹಾಡುಗಳಿಗೆ ಭಜನೆ ಎನ್ನುವರು. ಭಜನೆ ಸಾಮಾನ್ಯವಾಗಿ ಮೇಳ ಗೀತೆಯಾಗಿರುತ್ತದೆ. ವಿಜಾಪೂರ ಜಿಲ್ಲೆಯ ಪ್ರತಿಯೊಂದು ಹಳ್ಳಿಯಲ್ಲಿಯೂ ಭಜನಾ ಸಂಘಗಳಿವೆ. ಈ ಸಂಘದಲ್ಲಿ ಮಕ್ಕಳಿಂದ ಮುದುಕರವರೆಗೆ ಎಲ್ಲ ವಯಸ್ಸಿನವರೂ ಇರುತ್ತಾರೆ. ಹತ್ತೆಂಟು ಕಲಾವಿದರು ಸೇರಿ ಭಜನಾಮಂದಿರ ಇಲ್ಲವೇ ಊರಿನ ದೇವಮಂದಿರದಲ್ಲಿ ಭಜನೆ ಮಾಡುತ್ತಾರೆ. ಇವರಿಗೆ ವೇಷಭೂಷಣದ ಕಟ್ಟುಪಾಡುಗಳಿಲ್ಲ. ಇವರೆಲ್ಲ ನಿತ್ಯದ ವೇಷದಲ್ಲಿಯೇ ಇರುತ್ತಾರೆ. ಈ ಮೇಳದವರು ಹಾರ್ಮೋನಿಯಂ, ತಾಳ, ದಮಡಿಗಳೊಂದಿಗೆ, ಮುಮ್ಮೇಳ ಮತ್ತು ಹಿಮ್ಮೇಳವಾಗಿ ಹಾಡುತ್ತಾರೆ. ಶಿವಭಜನೆ, ಹರಿಭಜನೆ, ರಾಮಭಜನೆ ಮುಂತಾದ ಪ್ರಕಾರಗಳಲ್ಲಿ ಭಜನೆ ನಡೆಯುತ್ತಾರೆ. ವಿಜಾಪೂರ ಜಿಲ್ಲೆಯಲ್ಲಿ ಮನಗೂಳಿಯ ಶ್ರೀಮತಿ ಲಕ್ಷ್ಮೀಬಾಯಿ ತಂದೆ. ಸಂಗಪ್ಪ ಮಾದರ ಇವರ ಸೋಮೇಶ್ವರ ಭಜನಾ ಮಂಡಳ, ವಿಜಾಪೂರದ ಶ್ರೀ ದುಂಡಪ್ಪ ಅವ್ವಣ್ಣಪ್ಪ ಮುತ್ತಗಿ ಭಜನಾ ಸಂಘ, ಶ್ರೀ ಬಾಳಪ್ಪ ಫಕೀರಪ್ಪ ಕಣಮುತನಾಳ ಯೋಗಾದುರ ಶಾಲನಿ ವಿಜಾಪೂರ, ಹಳ್ಳುರದ ಸಿದ್ದಪ್ಪ ಚಂದಪ್ಪ ಪೂಜಾರಿ, ಸಾಲೋಟಗಿಯ ಶ್ರೀ ಅರ್ಜುನ ಯಮನಪ್ಪ ಧರೆನವರ ಭಜನಾ ಸಂಘ, ಹೀಗೆ ವಿಜಾಪೂರ ಜಿಲ್ಲೆಯಲ್ಲಿ ೫೦ ರಷ್ಟು ಭಜನಾಮೇಳಗಳು ಕಂಡು ಬರುತ್ತವೆ. ಜೊತೆಗೆ ಲಂಬಾಣಿ ಭಾಷೆಯ ಭಜನಾ ಮಂಡಳಿಗಳೂ ಕೂಡ ಇವೆ. ಮಶಣಾಪುರದ ಶ್ರೀ ನಾರಾಯಣ ಮಿತ್ತು ಲಮಾಣಿ ಸಂಘ, ಕೆಸರಾಳ ತಾಂಡೆಯ ಶ್ರೀ ಅಂಕರ ಮನ್ನೂ ಲಮಾಣಿ ಸಂಘ, ಸಾಲೋಟಗಿಯ ಗಂಗಾರಾಮ ತುಕಾರಾಮ ರಾತೋಡ ಸಂಘ, ಮಿಂಚನಾಳದ ಶ್ರೀ ರಾಮನಿಂಗ ಚಂ. ರಾತೋಡ ಸಂಘ, ಹಲಸಂಗಿಯ ಶ್ರೀ ಲಾಲು ಗೋಮ ಚವ್ಹಾಣ ಸಂಘ ಎಂಬ ದೊಡ್ಡ ಪಟ್ಟಿಯನ್ನೇ ವಾಲಿಯವರು ನೀಡಿದ್ದಾರೆ.

ವೀರಶೈವ ಪರಂಪರೆಯ ವಿಶಿಷ್ಟ ಧಾರ್ಮಿಕ ಕಲೆ 'ವೀರ ಗಾಸೆ' ಈ ಕಲೆ ವೀರಭದ್ರನ ಶೌರ್ಯ, ಶಿವನ ಆದಿತ್ಯವನ್ನು ಸಾರುವ ದೈವಾರಾಧನೆಯ ಕಲೆಯಾಗಿದೆ. ಈ ಕಲಾವಿದರು. ಹೆಚ್ಚಾಗಿ ಪಂಚಾಳ ಸಮಾಜದಿಂದ ಬಂದವರಾಗಿದ್ದಾರೆ. ತುಂಬ ವರ್ಣಮಯವಾದ ಆಕರ್ಷಕವಾದ ವೇಷಭೂಷಣ ಧರಿಸಿರುತ್ತಾರೆ. ವೀರಗಾಸೆಯವರು ವೀರಭದ್ರನ ಆದಿತ್ಯವನ್ನು ಒಡಪುಗಳ ಮೂಲಕ ಹೇಳಿ ಕುಣಿಯಲಾರಂಭಿಸಿ ಕೊನೆಗೆ ತಮ್ಮ ನಾಲಿಗೆ, ತುಟಿ, ಕೆನ್ನೆ, ಹೊಟ್ಟೆ ಮೊದಲಾದ ಕಡೆ ಶಸ್ತ್ರ ಚುಚ್ಚಿಕೊಳ್ಳುತ್ತಾರೆ. ಈ ಕಲಾವಿದರು ಕುಣಿಯುವಾಗ ಪಕ್ಕದಲ್ಲಿ

ಸಂಬಾಳದವಾದನ , ಶಹನಾಯಿ, ತಾಳವಾದ್ಯಗಳ ಮೇಳವಿರುತ್ತದೆ. ವಿಜಾಪೂರ ಜಿಲ್ಲೆಯ ವೀರಗಾಸೆ ತಂಡಗಳನ್ನು ವಾಲಿಯವರು ಕೆಳಗಿನಂತೆ ಪಟ್ಟಿ ಮಾಡಿದ್ದಾರೆ.

೧. ಶ್ರೀ ಮನೋಹರ ರಾಚಪ್ಪ ಬಡಿಗೇರ. – ಊರು – ಬಿಜ್ಜರಗಿ ತಾ : ವಿಜಾಪೂರ

೨. ಶ್ರೀ ಬಸಪ್ಪ ಮೋನಪ್ಪ ಬಡಿಗೇರ. – ಊರು – ಇಂಚಗೇರಿ ತಾ : ಇಂಡಿ

೩. ಶ್ರೀ ಕಮಲಾಕರ ವಿ. ಪೋದ್ದಾರ. – ಊರು – ಇಂಚಗೇರಿ ತಾ : ಇಂಡಿ

೪. ಶ್ರೀ ಮಲ್ಲಿಕಾರ್ಜುನ ಮೇತ್ರಿ. – ಊರು – ಇಂಚಗೇರಿ ತಾ : ಇಂಡಿ

೫. ಶ್ರೀ ಸಿದ್ರಾಮಯ್ಯ ಚ. ಹಿರೇಮಠ – ಊರು – ಸವನಳ್ಳಿ ತಾ : ವಿಜಾಪೂರ

೬. ಶ್ರೀ ರಾಮಪ್ಪ ಪಾ. ಬಡಿಗೇರ – ಊರು – ಶಿವಣಗಿ ತಾ : ವಿಜಾಪೂರ

೭. ಶ್ರೀ ಈರಪ್ಪ ಯ. ಹೆಬ್ಬಾಳ – ಊರು – ಗೋಳಸಂಗಿ ತಾ : ಬ.ಬಾಗೇವಾಡಿ

೮. ಶ್ರೀ ರಾಮಪ್ಪ ಕಾ. ಬಡಿಗೇರ – ಊರು – ಕೋಟ್ಯಾಳ ತಾ : ವಿಜಾಪೂರ

೯. ಶ್ರೀ ನಾಗಲಿಂಗಪ್ಪ ಪತ್ತಾರ – ಊರು – ಕೋರವಾರ ತಾ : ಸಿಂದಗಿ

೧೦. ಶ್ರೀ ಸಾಯಬಣ್ಣ ಸಿ. ಬೆನಕನಳ್ಳಿ – ಊರು – ಅಂಜುಟಗಿ ತಾ : ಇಂಡಿ

ಮೂಲತಃ ದೈವಾರಾಧನೆಯ ಕಲೆಯಾಗಿದ್ದ ಗೊಂದಲ ಹಾಕುವುದು ಇಂದು ಕಲೆಯಾಗಿ ಮಾರ್ಪಟ್ಟು ಗೊಂದಲಿಗರ ಮೇಳ ಎಂದು ಕರೆಯಿಸಿಕೊಳ್ಳುತ್ತಿದೆ. ಇವರ ಕುಲದೇವತೆ ಅಂಬಾಭವಾನಿ. ಕೆಲವು ಕಡೆ ರೇಣುಕಾದೇವಿಯನ್ನು ಪೂಜಿಸುತ್ತಾರೆ. ಈ ಮೇಳದಲ್ಲಿ ಸಾಮಾನ್ಯವಾಗಿ ಮೂರು ಜನ ಕಲಾವಿದರಿರುತ್ತಾರೆ. ನಾಯಕ ತಾಳವನ್ನು ಉಳಿದವರಿಬ್ಬರು ಸಂಬಾಳ ಮತ್ತು ಏಕತಾರಿಯನ್ನೂ ನುಡಿಸುತ್ತಾರೆ. ಆಕರ್ಷಕ ವೇಷಭೂಷಣ ಧರಿಸಿರುತ್ತಾರೆ. ಇವರು ನಳ-ನೀಳರ ಕಥೆ, ಯಲ್ಲಮ್ಮನ ಕಥೆ, ಭೋಜರಾಜನ ಕಥೆ, ಗುಣಸಾಗರಿ ಜಯರಾಣಿಯರ ಕಥೆ, ಅಮರಸೇನನ ಕಥೆ ಹೀಗೆ ಮುಂತಾದ ಕಥೆಗಳನ್ನು ರಾಗವಾಗಿ ಹೇಳುತ್ತಾ ನಡುನಡುವೆ ಸ್ವಾರಸ್ಯವಾಗಿ ವಿವರಣೆ ನೀಡುತ್ತಾರೆ. ವಿಜಾಪೂರ ಜಿಲ್ಲೆಯ ಗೊಂದಲಿಗರ ಪ್ರಮುಖ ಮೇಳಗಳನ್ನು ವಾಲಿಯವರು ಈ ರೀತಿಯಲ್ಲಿ ಹೇಳಿದ್ದಾರೆ.

೧. ಶ್ರೀ ಚಂದ್ರಕಾಂತ ಶಿವರಾಮ ಕಾಳೆ.

ಗೊಂದಳಿ ಗಲ್ಲಿ, ಜೋರಾಮರ ಪೇಟೆ ವಿಜಾಪೂರ

೨. ಶ್ರೀ ಭೀಮಶಿ ರಾ. ಸೂರ್ಯವಂಶಿ.

ತಾಲೂಕ ಕಛೇರಿ ಹಿಂದೆ ಬ. ಬಾಗೇವಾಡಿ

೩. ಶ್ರೀ ಶಂಕರ ಹು ಭಿಸೆ ತೊರವನಾಕು ತಾ : ವಿಜಾಪೂರ

೪. ಶ್ರೀ ತುಕಾರಾಮ ವ್ಹಿ. ಭೋಸಲೆ, ಬರಡೋಲ ತಾ : ಇಂಡಿ

೫. ಶ್ರೀ ಬಾಪು ಮಾ. ಬಿಸೆ ಹಲಸಂಗಿ ತಾ : ಇಂಡಿ

ಯಲ್ಲಮ್ಮನ ಹೆಸರಿನಲ್ಲಿ ದೀಕ್ಷೆ ಪಡೆದು ಬಳಸಿ ನುಡಿಸುವ ವಾದ್ಯವೇ ಚೌಡಿಕೆ ಹಲವಾರು ಜನರು ಇದನ್ನು ನುಡಿಸುವುದುಂಟು. ಚೌಡಿಕೆ ಕಲಾವಿದೆಯರಿಗೆ ಜೋಗತಿ ಎಂದು ಹೆಸರು ಇವರ ಕಲಾ ತಂಡದಲ್ಲಿ ಸಾಮಾನ್ಯವಾಗಿ ಮೂರು ಜನರು ಇರುತ್ತಾರೆ. ಮುಖ್ಯ ಕಲಾವಿದೆ ಚೌಡಿಕೆ ನುಡಿಸುತ್ತ ಹಾಡು ಹೇಳುವಳು. ಉಳಿದವರಲ್ಲಿ ಒಬ್ಬರು ತುಂತನಿ ಇನ್ನೊಬ್ಬರು ತಾಳದೊಂದಿಗೆ ಹಾಡಿಗೆ ಧನಿಗೂಡಿಸುವರು. ಚೌಡಿಕೆ ಹಾಡುಗಳಲ್ಲಿ ಶಕ್ತಿದೇವಿ ಯಲ್ಲಮ್ಮನ ಮಹಿಮೆ, ಪೂಜೆ, ಜಾತ್ರೆ, ಸ್ಥಳ ಮಹಾತ್ಮೆ ದೇವಿ ಚರಿತ್ರೆ, ಮುಗ್ಧಭಕ್ತಿ ಮುಂತಾದ ವಿಷಯಗಳ ವರ್ಣನೆ ಕಂಡು ಬರುತ್ತದೆ. ಈ ಕಲಾತಂಡಗಳಲ್ಲಿ ಪ್ರಮುಖವಾದವುಗಳು.

೧. ಶ್ರೀಮತಿ ಗೌರವ್ವ ಮಾದರ, ತಿಕೋಟಾ ತಾ. ಜಿ : ವಿಜಾಪೂರ

೨. ಶ್ರೀಮತಿ ಮಲ್ಲಮ್ಮ ತಂದೆ ಲಕ್ಷ್ಮಣ ಗುಡಿಮನಿ, ತೊರವಿ ತಾ.ಜಿ. : ವಿಜಾಪೂರ

೩. ಶ್ರೀ ಬಸಪ್ಪ ಹುಸನಪ್ಪ ಚೌಡಿಕೇರ, ಹಳ್ಳೂರ ತಾ : ಮುದ್ದೇಬಿಹಾಳ

೪. ಶ್ರೀಮತಿ ರತ್ನವ್ವಾ ಮಾದರ ಸಾರವಾಡ ತಾ : ವಿಜಾಪೂರ ಇದಲ್ಲದೇ ಇನ್ನೂ ೮-೧೦ ಕಲಾ ತಂಡಗಳು ಈ ಜಿಲ್ಲೆಯಲ್ಲಿವೆ.

೨ ವಾದ್ಯ ಪ್ರಧಾನ ಕಲೆಗಳು :

ಡೊಳ್ಳಿನ ಹಾಡುಗಳು, ಜೆಟ್ಟಿಲಗಿ ಮೇಳ, ಸಂಬಾಳವಾದನ ಮೇಳ, ಕರಡಿ ಮಜಲು ವಾದ್ಯ ಪ್ರಧಾನ ಕಲೆಗಳಾಗಿವೆ. ಜಾನಪದ ಕಲೆಗಳಲ್ಲಿ ಡೊಳ್ಳಿನ ಹಾಡು ಹಾಗೂ ಕುಣಿತಗಳು ಗಂಡು ಕಲೆ ಎಂದೇ ಹೆಸರು ಪಡೆದಿವೆ. ಡೊಳ್ಳಿನ ಹಾಡುಗಳಲ್ಲಿ ಹಾಲುಮತ ಪುರಾಣ, ಅನುಸೂಯಾ ಪದ, ಮಾರ್ಕಂಡೇಯ ಚರಿತ್ರೆ, ಗಜಾಸುರ, ಬೀರಲಿಂಗೇಶ್ವರ ಪದ, ಮೈಲಾರಲಿಂಗೇಶ್ವರ, ರೇವಣಸಿದ್ದೇಶ್ವರ, ಶರಣರ ಚರಿತ್ರೆ, ಹುಲಜಂತಿ ಮಾಳಿಂಗರಾಯ ಚರಿತ್ರೆ ಮೊದಲಾದವು ಸಮಾವೇಶಗೊಳ್ಳುತ್ತವೆ. ವಿಜಾಪೂರ ಜಿಲ್ಲೆಯಲ್ಲಿರುವ ಪ್ರಸಿದ್ಧ ಡೊಳ್ಳಿನ ಹಾಡಿನ ಮೇಳಗಳು ಇಂತಿವೆ.

೧. ಶ್ರೀ ಚಂದ್ರಾಮ ಭೀಮಣ್ಣಾ ಪೂಜಾರಿ, ಹಾವಿನಹಾಳ ತಾ : ಇಂಡಿ

೨. ಶ್ರೀ ಸೋಮಲಿಂಗ ದುಂಡಪ್ಪ ಧನಗೊಂಡ, ಬಿಜ್ಜರಗಿ ತಾ : ವಿಜಾಪೂರ

೩. ಶ್ರೀ ತುಕಾರಾಮ ಯಂಕಪ್ಪ ಲಂಗೋಟಿ, ಬಿಜ್ಜರಗಿ ತಾ : ವಿಜಾಪೂರ

೪. ಶ್ರೀ ಸುರೇಶ ರಾಮಚಂದ್ರ ಜೋಶಿ, ನಿಡೋಣಿ ತಾ : ವಿಜಾಪೂರ

೫. ಶ್ರೀ ಲಕ್ಷ್ಮಣ ಶರಣಪ್ಪ ಪೂಜಾರಿ, ಮುತ್ತಗಿ ತಾ : ಬ. ಬಾಗೇವಾಡಿ

೬. ಶ್ರೀ ಶ್ರೀಶೈಲ ಬಾಲಪ್ಪ ಬೊಮ್ಮಣಗಿ ಇಂಗಳೇಶ್ವರ ತಾ. ಬ. ಬಾಗೇವಾಡಿ

ಚಿಟ್ಟಲಗಿ ಮೇಳ ವಿಜಾಪೂರ ಜಿಲ್ಲೆಯ ವಿಶಿಷ್ಟ ಜಾನಪದ ಕಲೆಯಾಗಿದೆ. ಈ ಮೇಳದಲ್ಲಿ ೫ ರಿಂದ ೬ ಜನ ಕಲಾವಿದರಿರುತ್ತಾರೆ. ಒಬ್ಬರು ಚಿಟ್ಟಲಗಿ, ಇಬ್ಬರು ತಾಳದವರು, ಸನಾದಿ ಮತ್ತು ಶ್ರುತಿ ಕೂಡಿ ಇಬ್ಬರು, ಹೀಗೆ ಇರುವುದು ವಾಡಿಕೆ ಶ್ರೀ ಬಸವರಾಜ ಭೀಮಣ್ಣಾ ಹೂಗಾರ, ತಾಂಬಾ ತಾ : ಇಂಡಿ ಮತ್ತು ಈ ಜಿಲ್ಲೆಯಲ್ಲಿ ೭-೮ ಕಲಾತಂಡಗಳಿವೆ.

ಸಂಬಾಳವಾದನ ಮೇಳ ಬಿಜಾಪೂರ ಜಿಲ್ಲೆಯ ಅಪರೂಪದ ಕಲೆ. ಈ ಕಲಾ ತಂಡದಲ್ಲಿ ಎಂಟು ಜನರಿರುವರು. ಇದೊಂದು ಶಾಸ್ತ್ರೋಕ್ತ ವಾದ್ಯ ಪ್ರಧಾನ ಕಲೆಯಾಗಿದೆ. ಈ ಕಲಾ ಮೇಳಗಳು ವಿಜಾಪೂರ ಜಿಲ್ಲೆಯಲ್ಲಿ ಕಡಿಮೆ ಸಂಖ್ಯೆಯಲ್ಲಿವೆ. ಅವುಗಳಲ್ಲಿ.

೧. ಶ್ರೀ ವಿಠೋಬಾ ರಾಮಚಂದ್ರ ಪೂಜಾರಿ, ಸಾವಳಸಂಗ ತಾ : ಇಂಡಿ

೨. ಶ್ರೀ ರಾಮಪ್ಪ ಸಾಬು ಭಜಂತ್ರಿ, ಶಾಖಂಡಕಿ ತಾ : ಜಿ : ವಿಜಾಪೂರ

೩. ಶ್ರೀ ಕಲ್ಲಪ್ಪ ವೀರಭದ್ರಪ್ಪ ಹೂಗಾರ, ಮುಳವಾಡ ತಾ : ಬ.ಬಾಗೇವಾಡಿ

೪. ಶ್ರೀ ಹಣಮಂತ ಗೋವಿಂದಪ್ಪ ಹೂಗಾರ, ಹುಂಡರಗಲ್ಲ ತಾ : ಮುದ್ದೇಬಿಹಾಳ

೫. ಶ್ರೀ ಭೀಮಪ್ಪ ಹೂಗಾರ, ಹತ್ತರಕಿಹಾಳ ತಾ : ಬ.ಬಾಗೇವಾಡಿ

೬. ಶ್ರೀ ಅರವಿಂದ ಶ. ಹೂಗಾರ, ನಾಗಠಾಣ ತಾ : ವಿಜಾಪೂರ

೭. ಶ್ರೀ ಬಾಬು ಬಸಪ್ಪ ಕೊರವೇರ, ನಾಗೂರ ತಾ : ಬ.ಬಾಗೇವಾಡಿ

ಸಾಮಾನ್ಯವಾಗಿ ಗಂಡುದೇವರ ಉತ್ಸವಗಳಲ್ಲಿ 'ಕರಡಿ ಮಜಲು' ಮೇಳ ಕಂಡು ಬರುತ್ತದೆ. ಹಾಗೆಯೇ ಜಾತ್ರೆ, ಧಾರ್ಮಿಕ ಗುರುಗಳ ಮೆರವಣಿಗೆಯಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ೮ ಜನ ಕಲಾವಿದರು ಕರಡಿ ಮಜಲಿನಲ್ಲಿ ಕಂಡು ಬರುತ್ತಾರೆ. ವಿಜಾಪೂರ ಜಿಲ್ಲೆಯಲ್ಲಿ ಕರಡಿ ಮಜಲಿನ ಮುಖ್ಯ ಕಲಾ ತಂಡಗಳು ಇಂತಿವೆ.

೧. ಶ್ರೀ ಚಂದ್ರಶೇಖರ ಈಶಪ್ಪ ಹಾದಿಮನಿ, ಮುತ್ತಗಿ ತಾ. ಬ.ಬಾಗೇವಾಡಿ

೨. ಶ್ರೀ ಸಿದ್ದಪ್ಪ ಹನುಮಂತಪ್ಪ ಹೂಗಾರ, ಹಂಡರಗಲ್ಲ ತಾ : ಮುದ್ದೇಬಿಹಾಳ

೩. ಶ್ರೀ ಯಂಕಪ್ಪ ಗದಿಗೆಪ್ಪ ಪೂಜಾರಿ, ದೇವಾಪೂರ ತಾ : ವಿಜಾಪೂರ

೪. ಶ್ರೀ ಮಲಕಾರಿ ಸಂಗಪ್ಪ ಕಟಗೇರಿ, ಗೋಡಿಹಾಳ ತಾ : ಇಂಡಿ

**ಗೀತ ಪ್ರಧಾನ ಕಲೆಗಳು :**

ಹಂತಿ ಹಾಡು, ಕಂಬಿಯ ಹಾಡು, ಗೀಗಿ ಹಾಡು, ಮುಂತಾದವು ಗೀತ ಪ್ರಧಾನ ಕಲೆಗಳಾಗಿವೆ. ಕೃಷಿಕರು ರಾಶಿ ಮಾಡುವಾಗ ಹಂತಿಯ ಕಾಲಕ್ಕೆ ಜೆಳ್ಳಂಬಳತನ ಹಾಡುವ

ಹಾಡುಗಳೇ ಹಂತಿ ಹಾಡುಗಳು. ವಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ನಾಲ್ಕು ಜನ ಕಲಾವಿದರು ತುಂಬ ಚೆನ್ನಾಗಿ ಹಂತಿ ಹಾಡನ್ನು ಹಾಡಬಲ್ಲವರಾಗಿದ್ದಾರೆ.

೧. ಶ್ರೀ ಪರಸಪ್ಪ ಗಣಿ

೨. ಶ್ರೀ ಮುರಿಗೆಪ್ಪ ಸಾಬಣ್ಣ ಬೆಳ್ಳುಬ್ಬಿ

೩. ಶ್ರೀ ಬಸಪ್ಪ ಮಲ್ಲಪ್ಪ ಕೋಲಕಾರ

೪. ಶ್ರೀ ನಾಗಪ್ಪ ಮಲ್ಲಪ್ಪ ಕೋಲಕಾರ ಇವರು ಶ್ರೀ ಬಸವೇಶ್ವರ ಹಂತಿ ಹಾಡುಗಳ ಸಂಘ ಕಟ್ಟಿಕೊಂಡು ಕಲಾಸೇವೆ ಮಾಡುತ್ತಾ ಬಂದಿದ್ದಾರೆ.

ಶ್ರೀಶೈಲ ಯಾತ್ರೆಗೆ ಕಂಬಿಯೊಂದಿಗೆ ಮೇಳವಾಗಿ ಸಾಗುವ ಭಕ್ತರು ಹಾಡುವ ಹಾಡುಗಳೇ ಕಂಬಿ ಹಾಡುಗಳು. ಶ್ರೀ ಪ್ಪಿ.ಜಿ. ಹಿರೇಮಠ ಎಂಬುವವರು ಚೆನ್ನಾಗಿ ಹಾಡುತ್ತಾರೆ.

ಉತ್ತರ ಕರ್ನಾಟಕದ ಜನಪ್ರಿಯ ಕಲೆ 'ಗೀ ಗೀ ಹಾಡು' ಇಲ್ಲಿ ಸಾಮಾನ್ಯವಾಗಿ ಮೂರು ಜನರಿರುತ್ತಾರೆ. ಮುಖ್ಯಸ್ಥ ಡಪ್ಪು ಬಾರಿಸುತ್ತ ಮುಮ್ಮೇಳದಲ್ಲಿ ಹಾಡುವನು. ಉಳಿದ ಇಬ್ಬರಲ್ಲಿ ಒಬ್ಬರು ತುಂತುಣಿ ಇನ್ನೊಬ್ಬರು ತಾಳವಾದ್ಯ ಬಾರಿಸುತ್ತ ಹಿಮ್ಮೇಳವಾಗಿ ಹಾಡುತ್ತ ಗೀಯ ಗೀಯ ಎಂಬ ಸೊಲ್ಲು ಹೇಳುವರು. ಸವಾಲ್ ಜವಾಬ ನಡೆಯುತ್ತದೆ. ಹರದೇಶಿ ನಾಗೇಶಿ ಎಂಬ ಹೆಜ್ಜೆಂದು ಹಾಡುವ ಪಂಗಡ ಪ್ರಕಾರಗಳಿವೆ. ವಿಜಾಪೂರ ಜಿಲ್ಲೆಯಲ್ಲಿ ಈ ಗೀಗೀ ಹಾಡಿನ ಮುಖ್ಯ ಕಲಾ ತಂಡಗಳು ಇಂತಿವೆ.

೧. ಶ್ರೀ ಶರಣಪ್ಪ ಕಲ್ಲಪ್ಪ ವಾಲಿ, ತಂಡ

೨. ಶ್ರೀಮತಿ ದುರಗವ್ವ ಯಮನಪ್ಪ ಮಾದರ, ಮಳಿಯೋಗಿ ಗೀ ಗೀ ಮೇಳ ಧನ್ಯಾಳ ತಾ : ಜಿ : ವಿಜಾಪೂರ

೩. ಶ್ರೀ ಹುಸೇನಸಾಬ ಅನಸರಸಾಬ ವಾಲಿಕರ. ಸಾರವಾಡ : ತಾ : ಜಿ : ವಿಜಾಪೂರ

೪. ಶ್ರೀಮತಿ ಹನುಮವ್ವ ಶಾಸಪ್ಪ ಹಂಗರಗಿ ಕಂಬಾಗಿ ತಾ : ಜಿ : ವಿಜಾಪೂರ

೫. ಶ್ರೀ ವಿಠ್ಠಲ ಭೀಮಶ್ಯಾ ಕಟಬರ, ಮಲಘಾಣ ತಾ : ಸಿಂದಗಿ ಜಿ : ವಿಜಾಪೂರ

೬. ಶ್ರೀ ಶಂಕರ ಮಾರುತಿ ಕಟಬರ, ಕಮಸಗಿ ತಾ : ಸಿಂದಗಿ

೭. ಶ್ರೀಮತಿ ಭೀಮವ್ವ ಯಮನಪ್ಪ ಮಾದರ ಮಡ್ನಳ್ಳಿ ತಾ : ಸಿಂದಗಿ

೮. ಶ್ರೀ ಶಾಂತಪ್ಪ ಶಿವಯೋಗಪ್ಪ ತಳವಾರ, ಬೇಡಗಿ ತಾ : ಇಂಡಿ

೯. ಶ್ರೀಮತಿ ರೇಣುಕಾ ಪೀರಪ್ಪ ಮಾದರ, ಗಣಿಹಾರ ತಾ : ಸಿಂದಗಿ

**ಕುಣಿತ ಪ್ರಧಾನ ಕಲೆಗಳು :**

ಡೊಳ್ಳಿನ ಕುಣಿತ, ಕೀಲು ಕುದುರೆ ಕುಣಿತ, ಹೆಜ್ಜೆಮೇಳ, ಸಂಪ್ರದಾನಿ ದಟ್ಟಿ ಕುಣಿತ ಬಯಲಾಟದ ಕುಣಿತ, ನಂದಿಧ್ವಜ ಕುಣಿತ, ಲಂಬಾಣಿ ಕುಣಿತ, ಕೋಲಾಟ ಇವು ಕುಣಿತ ಪ್ರಧಾನ ಕಲೆಗಳಾಗಿವೆ.

ಡೊಳ್ಳಿನ ಕುಣಿತದಲ್ಲಿ ವಿಜಾಪೂರ ಜಿಲ್ಲೆಯ ವಿಠ್ಠಲ ಜಟ್ಟೆಪ್ಪ ಪೂಜಾರಿ, ಕಾರಿಕೊಳ್ಳ ; ಶ್ರೀ ಕಲ್ಲಪ್ಪ ದುಂಡಪ್ಪ ಬೂದಿಹಾಳ, ಸವನಳ್ಳಿ ತಾ : ವಿಜಾಪೂರ, ಶ್ರೀ ಮಲ್ಲಪ್ಪ ಜಟ್ಟೆಪ್ಪ ತಾಳೇವಾಡ, ಮನಗೂಳಿ ತಾ : ಬ. ಬಾಗೇವಾಡಿ, ಶ್ರೀ ಕರಿಯಪ್ಪ ಶಿವಪ್ಪ ತಳವಾರ ಧ್ಯಾಳ ತಾ : ವಿಜಾಪೂರ ಮೊದಲಾದ ಪ್ರಸಿದ್ಧ ಡೊಳ್ಳಿನ ಕುಣಿತದ ತಂಡಗಳಿವೆ. 'ಕೀಲುಕುಣಿತ' ಮನರಂಜನೆಯ ಸುಂದರ ಕಲೆಯಾಗಿದೆ. ಈ ಕಲೆಯಲ್ಲಿ ಸಾರವಾಡದ ಶ್ರೀ ಮಹಮ್ಮದಸಾಬ ಅನಸರಸಾಬ ಸನದಿ ತಂಡದ ಕಲಾವಿದರು ಕೀಲು ಕುಣಿತದಲ್ಲಿ ಹೆಸರು ಮಾಡಿದ್ದಾರೆ. "ಹೆಜ್ಜೆಮೇಳ" ಕಲೆ ಒಂದು, ಮುಸ್ಲಿಂ ಸಾಂಸ್ಕೃತಿಕ ಸಮನ್ವಯದ ಸಂಕೇತವಾಗಿದೆ. ಇದು ಮೊಹರಮ್ ತಿಂಗಳಿನ ಹತ್ತನೆಯ ದಿನ ಮುಸ್ಲಿಂರು ಆಚರಿಸುವ 'ಅಲಾವಿ' ಹಬ್ಬದ ಕುಣಿತವಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಶ್ರೀ ಸದಾಶಿವ ಬಸಪ್ಪ ಜಮಖಂಡಿ ಕಣಬೂರ ತಾ : ವಿಜಾಪೂರ ಪ್ರಸಿದ್ಧ ಹೆಜ್ಜೆ ಮೇಳವಾಗಿದೆ. 'ಸಂಪ್ರದಾನಿ ದಟ್ಟಿ ಕುಣಿತ' ವಿಜಾಪೂರ ಜಿಲ್ಲೆಯ ಮತ್ತೊಂದು ವಿಶಿಷ್ಟ ಕಲೆಯಾಗಿದೆ. ಶ್ರೀ ಬಸಪ್ಪ ಸಿದ್ದಪ್ಪ ಹಾವಡಿ ಬಬಲೇಶ್ವರ ತಾ : ವಿಜಾಪೂರ ಹಾಗೂ ಶ್ರೀ ಹನುಮಂತಪ್ಪ ಗೋವಿಂದಪ್ಪ ಹೂಗಾರ ಹಂಡರಗಲ್ಲ ತಾ : ಮುದ್ದೇಬಿಹಾಳ – ಇವೆರಡೂ ತಂಡಗಳು ಶ್ರೇಷ್ಠ ಸಂಪ್ರದಾನಿ ದಟ್ಟಿ ಕುಣಿತ ತಂಡಗಳಾಗಿವೆ. ಶೈವ ಸಂಪ್ರದಾಯದ ಕುಣಿತಗಳಲ್ಲಿ 'ನಂದೀಧ್ವಜ ಕುಣಿತ' ಒಂದು ಗಂಡು ಕಲೆಯಾಗಿದೆ. ಲಂಬಾಣಿ ಕುಣಿತ ಕೋಲಾಟಗಳು ಕೂಡ ವಿಜಾಪೂರ ಜಿಲ್ಲೆಯಲ್ಲಿ ಕಂಡು ಬರುವ ಕಲೆಗಳಾಗಿವೆ.

**ಸಮ್ಮಿಶ್ರ ಕಲೆಗಳು :**

ಶ್ರೀಕೃಷ್ಣ ಪಾರಿಜಾತ ಇದು ಜನಪ್ರಿಯ ಬಯಲಾಟವಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಏಳೆಂಟು ಶ್ರೀಕೃಷ್ಣ ಪಾರಿಜಾತ ಕಲಾತಂಡಗಳು ಕಂಡುಬರುತ್ತವೆ.

೧. ಶ್ರೀ ಶಿವನಗೌಡ ಮಲ್ಲಪ್ಪ ಕೋಟಿ, ಶ್ರೀಕೃಷ್ಣ ಪಾರಿಜಾತ ಸಂಘ, ಸಾರವಾಡ, ತಾ : ವಿಜಾಪೂರ

೨. ಶ್ರೀ ವಿಠೋಬಾ ಕಲ್ಲಪ್ಪ ಮರಡಿ, ಸಾಲೋಟಗಿ ತಾ : ಇಂಡಿ

೩. ಶ್ರೀ ಸಂಗಪ್ಪ ಈರಪ್ಪ ಮಾದನಶೆಟ್ಟಿ ಶ್ರೀ ಬಸವೇಶ್ವರ ಬಲಾಟ ಸಂಘ ಬ.ಬಾಗೇವಾಡಿ

೪. ಶ್ರೀ ಈಶ್ವರಯ್ಯ ಸಂಗಯ್ಯ ಪೂಜಾರಿ ಸಾರವಾಡ ತಾ : ಜಿ : ವಿಜಾಪೂರ

೫. ಶ್ರೀ ಗುರುಪಾದಯ್ಯ ಮಲ್ಲಯ್ಯ ಧಾರವಾಡಮಠ ಕಾಖಂಡಕಿ ತಾ : ಜಿ : ವಿಜಾಪೂರ

೬. ಶ್ರೀ ಹಾಜಿಸಾಹೇಬ ಅಮೀನಸಾಹೇಬ ನದಾಫ ಶ್ರೀಕೃಷ್ಣ ಪಾರಿಜಾತ ಸಂಘ ದಾಸ್ಯಾಳ ತಾ.ಜಿ. ವಿಜಾಪೂರ

೭. ಶ್ರೀಮತಿ ಮಾತಂಗೆವ್ವ ಯಮನಪ್ಪ ಮಾದರ ಶ್ರೀ ಬಸವೇಶ್ವರ ಬಯಲಾಟ ಸಂಘ ಬಸವನ ಬಾಗೇವಾಡಿ

'ತೊಗಲು ಗೊಂಬೆಯಾಟ' ಒಂದು ಅದ್ಭುತ ಕೈಚಳಕದ ಆಟವಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಶ್ರೀ ಗಣಪತಿ ಹನುಮಂತ ಕಟಬರ ಜೀರಪ್ಪನಗರ, ಇಂಡಿ ಜಿ: ವಿಜಾಪೂರ ಇವರ ಒಂದು ಮೇಳವಿದೆ. ಹಾಗೆಯೇ ಇಂಡಿ ತಾಲೂಕಿನ ಸಾಲೋಟಗಿಯಲ್ಲಿ ಶ್ರೀ ಗಡ್ಡೆಪ್ಪ ಕಟವಾಜಿ ಕಟಬರ ಎಂಬುವವರ ಇನ್ನೊಂದು ತೊಗಲಗೊಂಬೆಯಾಟದ ಮೇಳವಿದೆ. 'ರಾಧಾನಾಟ' ಸಣ್ಣಾಟದ ಒಂದು ಪ್ರಕಾರವಾಗಿದೆ. ಈ ಆಟಕ್ಕೆ ಡಪ್ಪ ಮುಖ್ಯ ವಾದ್ಯವಾಗಿರುವುದರಿಂದ 'ದಪ್ಪನಾಟ' ಎಂದು ಕರೆಯುತ್ತಾರೆ. ಜೀಜಿ ಇಂಗಳಗಿಯ ಶ್ರೀ ಮಲಕಪ್ಪ ಗುರಪ್ಪ ಬೇಲೂರ ಎಂಬುವರು ಸಣ್ಣಾಟದ ಒಂದು ಸಂಘ ಕಟ್ಟಿಕೊಂಡಿದ್ದಾರೆ. ಈ ಸಂಘದಲ್ಲಿ ಎಂಟು ಜನ ಕಲಾವಿದರಿದ್ದಾರೆ. ಇದಲ್ಲದೆ ದೇವಣಗಾಂವ, ಸಾಲೋಟಗಿ, ಸಾರವಾಡ, ಕನ್ನೂರ, ಹೆಬ್ಬಾಳಟ್ಟಿ, ಸವನಳ್ಳಿ ಮೊದಲಾದ ಊರುಗಳಲ್ಲಿ ಸಣ್ಣಾಟಗಳ ಹವ್ಯಾಸಿ ಕಲಾತಂಡಗಳಿವೆ.

**'ವಿಜಾಪೂರ ಜಿಲ್ಲೆಯ ಜನಪದ ಕಲಾವಿದರು'**

ಪ್ರಸ್ತುತ ಗ್ರಂಥವು ೫೬ ಜನ ವಿವಿಧ ಕಲಾವಿದರನ್ನು ಪರಿಚಯಿಸುತ್ತದೆ. ಆಯಾ ಕಲಾವಿದರ ಕಲಾಪ್ರಕಾರ, ಅವರ ಜನನ, ಬಾಲ್ಯ, ಶಿಕ್ಷಣ, ಅವರಿಗೆ ಕಲೆ ಕಲಿಸಿದ ಗುರು, ಅವರ ತಂಡದಲ್ಲಿ ಇರುವ ಸಹಕಲಾವಿದರು ಹಾಗೂ ಅವರ ಪಾತ್ರ, ಆ ತಂಡದ ಪ್ರಮುಖ ಕಾರ್ಯಕ್ರಮಗಳು ಮತ್ತು ಅವರಿಗೆ ದೊರೆತ ಪ್ರಶಸ್ತಿಗಳು, ಪ್ರಮಾಣ ಪತ್ರಗಳು ದಿನಾಂಕ ಸಹಿತ ಮಾಶಾಸನ ಪಡೆಯುತ್ತಿದ್ದಾರೆ ಎಂದಿನಿಂದ ಈ ಮೇಳದ ಮುಖ್ಯಸ್ಥರು ತಮ್ಮ ಕಲೆಯನ್ನು ಬೇರೆಯವರಿಗೆ ಕಲಿಸಿ ಸ್ಥಾಪಿಸಿದ ಕಲಾಸಂಘಗಳು, ಈ ಕಲಾವಿದರು ತಮ್ಮ ಕಲೆಯ ಬಗ್ಗೆ ಹಿಂದಿದ್ದ ಆಸಕ್ತಿ ಮೊದಲಾದ ವಿವರಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ದಾಖಲಿಸಲಾಗಿದೆ. ಸಾಧ್ಯವಾದಷ್ಟು ಜಿಲ್ಲೆಯ ಎಲ್ಲ ಕಲಾ ಪ್ರಕಾರಗಳನ್ನು ಗಮನಿಸಲಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ಇರುವ ಎಲ್ಲ ಕಲೆಗಳ ಕಲಾವಿದರ ಪರಿಚಯ ಇಲ್ಲಿ ಕೊಡಲಾಗಿದೆ.

ಕೃತಿಯಲ್ಲಿ ದಾಖಲಿಸಿದ ಎಲ್ಲ ಕಲಾವಿದರೂ ಸಾಮಾನ್ಯವಾಗಿ ೫೮ ವರ್ಷಗಳಿಗಿಂತ ಹಿರಿಯರಾಗಿದ್ದಾರೆ. ಕೆಲವು ಕಲಾವಿದರು ಅಪರೂಪವಾಗಿದ್ದು ೫೮ ವರ್ಷಗಳಿಂದ ಮೊದಲೇ ಸರಕಾರದ ಮಾಶಾಸನ ಪಡೆಯುತ್ತಿದ್ದಾರೆ. ಅಂಥವರ ವಯಸ್ಸನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲ. ಕೆಲವರು ಶ್ರೇಷ್ಠ ಕಲಾವಿದರೆನಿಸಿಕೊಂಡಿದ್ದು ಅವರಿಗೆ ಇನ್ನೂ ಮಾಶಾಸನ ದೊರೆಯುತ್ತಿಲ್ಲ.

ಸಾಮಾನ್ಯವಾಗಿ ವಿಜಾಪೂರ ಜಿಲ್ಲೆಯ ಐದೂ ತಾಲೂಕುಗಳಿಗೆ ಸಮಾನ ಆದ್ಯತೆ ನೀಡಲಾಗಿದೆ. ವಿಜಾಪೂರ ಜಿಲ್ಲೆಯ ಜಾನಪದ ದಿಗ್ಗಜರೆಂದೇ ಪ್ರಸಿದ್ಧಿ ಪಡೆದ ಡಾ ॥ ಸಿಂಪಿ ಲಿಂಗಣ್ಣ ಅವರ ಪರಿಚಯವೂ ಇಲ್ಲಿದೆ. ೨೦ ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ ಅಪ್ರತಿಮ ಲಾವಣಿಕಾರ ಹಲಸಂಗಿಯ ಖಾಜಾಬಾಯಿ ಅವರನ್ನೂ, ಅಪರೂಪದ ಚೌಡಕಿ ಕಲಾವಿದೆ ಶ್ರೀಮತಿ ಗೌರಮ್ಮ ಮಾದರ ಅವರನ್ನೂ, ಜನಪದ ಹಾಡುಗಾರ್ತಿ ಹಾಗೂ ಕಥೆಗಾರ್ತಿ ಶ್ರೀಮತಿ ಗೌರಮ್ಮ ಚಲವಾದಿ ಅವರನ್ನೂ ವಿಶಿಷ್ಟ ಕೌದಿ-ಕಸೂತಿ ಕಲಾವಿದೆ ಶ್ರೀಮತಿ ಈರವ್ವ ಕಡೇಮನಿ ಅವರನ್ನೂ ಇಲ್ಲಿ ಪರಿಚಯಿಸಲು ಶ್ರಮ ಪಡಲಾಗಿದೆ.

ವಿಜಾಪೂರ ಜಿಲ್ಲೆಯಲ್ಲಿ ಡೊಳ್ಳಿನ ಹಾಡಿನ, ಡೊಳ್ಳಿನ ಕುಣಿತದ ಮತ್ತು ಗೀಗೀ ಪದ, ಭಜನಾ ಪದಗಳ ಮೇಳಗಳು ಹೇರಳವಾಗಿವೆ. ಇವರ ಸಂಖ್ಯೆ ಅಧಿಕವಾಗಿರುವುದು ಅನಿವಾರ್ಯ. ಈಗ ಹಂತಿಕಟ್ಟಿ ರಾಶಿ ಮಾಡುವ ಕಾರ್ಯ ನಿಂತು ಹೋಗಿದೆ. ಇಂದಿನ ರಾಸಿಗಳು ಡಾಂಬರ ರಸ್ತೆಯ ಮೇಲೆ ನಡೆಯುತ್ತಿವೆ. ಹೀಗಿರುವಾಗ ಹಂತಿಯ ಹಾಡುಗಳಿಗೆ ಅವಕಾಶವೇ ಇಲ್ಲವಾಗಿದೆ. ಬಸವನ ಬಾಗೇವಾಡಿ ತಾಲೂಕಿನ ಕೊಲ್ಹಾರದಲ್ಲಿ ಹಂತಿ ಹಾಡುಗಳ ಒಂದು ಒಳ್ಳೇ ಮೇಳವಿದೆ. ಅದನ್ನು ಇಲ್ಲಿ ಪರಿಚಯಿಸಲಾಗಿದೆ.

ಸಾಮಾನ್ಯವಾಗಿ ಕಲಾವಿದರಲ್ಲಿ ಬಹಳಷ್ಟು ಜನ ಅಶಿಕ್ಷಿತರು. ಅವರಲ್ಲಿ ಅನೇಕರು ಪ್ರಶಸ್ತಿ, ಪ್ರಮಾಣ ಪತ್ರಗಳನ್ನೂ ಸರಿಯಾಗಿ ಇಟ್ಟಿರುವುದಿಲ್ಲ. ಅವರ ವಯಸ್ಸು ಕೇಳಿದರೆ ಜನ್ಮದಿನಾಂಕ ಗೊತ್ತಿರುವುದಿಲ್ಲ. ಕೆಲವರಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿಕಟ ಸಂಪರ್ಕವಿಲ್ಲ. ಅವರು ಕೇವಲ ಜಾತ್ರೆ, ಉತ್ಸವಗಳಲ್ಲಿಯೇ ಕಾರ್ಯಕ್ರಮ ನೀಡುತ್ತಾ ಬಂದಿದ್ದಾರೆ. ಇವೆಲ್ಲವುಗಳನ್ನು ಗಮನಿಸಿ ಸತ್ಯಕ್ಕೆ ಸಮೀಪವಿರುವ ಸಂಗತಿಗಳನ್ನೇ ದಾಖಲಿಸಿದ್ದಾರೆ.

ಸುಮಾರು ಎರಡು ತಿಂಗಳುಗಳವರೆಗೆ ಪ್ರಯತ್ನಪಟ್ಟು ವಿಷಯ ಸಂಗ್ರಹಿಸಿ ಬರೆದು ಈ ಗ್ರಂಥವನ್ನು ಡಾ ॥ ಎಂ.ಎನ್. ವಾಲಿಯವರು ಸಿದ್ಧಪಡಿಸಿದ್ದಾರೆ.

ಈ ಕೃತಿಯಲ್ಲಿ ಪರಿಚಯಕ್ಕೆ ಒಳಪಟ್ಟ ೫೯ ಕಲಾವಿದರ ಹೆಸರುಗಳು : ಖಾಜಾಬಾಯಿ, ಜಾನಪದ ದಿಗ್ಗಜ ಡಾ. ಸಿಂಪಿಲಿಂಗಣ್ಣ, ಶ್ರೀಮತಿ ಗೌರಮ್ಮ ಶೆಟ್ಟೆಪ್ಪ ಚಲವಾದಿ, ಗಣಪತಿ ಹಣಮಂತ ಕಟಬರ, ಭೀಮರಾಯ ರಾಮಣ್ಣ ಇಂಗಳೆ, ಮಲಕಪ್ಪ ಗುರಪ್ಪ ಬೇಲೂರ, ಮನೋಹರ ರಾಚಪ್ಪ ಬಡಿಗೇರ, ಮಹಮ್ಮದಸಾಬ ಅನಸರಸಾಬ ಸನದಿ, ಆದಪ್ಪ ಗುರಪ್ಪ ಸೋಲಾಪೂರ, ಶ್ರೀಮತಿ ಈರವ್ವ ಸಿದಗಿರಿ ಕಡೇಮನಿ, ಶಾಮರಾಯಗೂಳಪ್ಪ ಬಡಿಗೇರ, ಸೋಮಲಿಂಗ ಈಶ್ವರಪ್ಪ ತಳಕಡೆ, ವೀರಭದ್ರಯ್ಯ ಗುರಯ್ಯ ಹಿರೇಮಠ, ಪರಪ್ಪ ಸಂಗಪ್ಪ ಗಣಿ, ಚಂದ್ರಕಾಂತ ಶಿವರಾಮ ಕಾಳೆ, ಶ್ರೀಮತಿ ಗೌರಮ್ಮ ಮಾದರ, ಶ್ರೀಮತಿ ಮಲ್ಲಮ್ಮ ಲಕ್ಷ್ಮಣ ಗುಡಿಮನಿ, ಬಸಪ್ಪ ಹುಸನಪ್ಪ ಚೌಡಕೇರ, ಚಂದ್ರಾಮ ಭೀಮಣ್ಣ ಪೂಜಾರಿ, ಸೋಮಲಿಂಗ ದುಂಡಪ್ಪ ಧನಗೊಂಡ, ತುಕಾರಾಮ ಯಂಕಪ್ಪ ಲಂಗೋಟಿ, ಸುರೇಶ ರಾಮಚಂದ್ರ ಜೋಶಿ, ಲಕ್ಷ್ಮಣ ಶರಣಪ್ಪ ಪೂಜಾರಿ, ಶ್ರೀಶೈಲ ಬಾಲಪ್ಪ ಬೊಮ್ಮಣಗಿ, ವಿಠ್ಠಲ ಜಟ್ಟೆಪ್ಪ ಪೂಜರಿ ಕಲ್ಲಪ್ಪ ದುಂಡಪ್ಪ ಬೂದಿಹಾಳ, ಮಲ್ಲಪ್ಪ ಜಟ್ಟೆಪ್ಪ ತಳೇವಾಡ, ಕರಿಯಪ್ಪ ಶಿವಪ್ಪ ತಳವಾರ, ಶಿವನಗೌಡ ಮಲ್ಲಪ್ಪ ಕೋಟಿ, ವಿಠೋಬಾ ಕಲ್ಲಪ್ಪ ಮರಡಿ, ಸಂಗಪ್ಪ ಈರಪ್ಪ ಮಾದನಶೆಟ್ಟಿ, ಈಶ್ವರಯ್ಯ ಸಂಗಯ್ಯ ಪೂಜಾರಿ, ಗುರುಪಾದಯ್ಯ ಮಲ್ಲಯ್ಯ ಧಾರವಾಡಮಠ, ಹಾಜಿಸಾಬ ಅಮೀನಸಾಬ ನದಾಫ, ಶ್ರೀಮತಿ ಮಾತಂಗೆವ್ವ ಯಮನಪ್ಪ ಮಾದರ, ದಿ. ಶರಣಪ್ಪ ಕಲ್ಲಪ್ಪ ವಾಲಿ, ಶ್ರೀಮತಿ ದುರಗವ್ವ ತಂದೆ ಯಮನಪ್ಪ ಮಾದರ, ಹುಸೇನಿಸಾಬ ಅನಸರಸಾಬ ವಾಲೀಕರ, ಶ್ರೀಮತಿ ಹನುಮವ್ವ ತಂದೆ ಶಾಸಪ್ಪ ಹಂಗರಗಿ, ವಿಠಲ ಭೀಮಶಾ ಕಟಬರ, ಶಂಕರ ಮಾರುತಿ ಕಟಬರ, ಶ್ರೀಮತಿ ಭೀಮವ್ವ ತಂದೆ ಯಮನಪ್ಪ ಮಾದರ, ಶಾಂತಪ್ಪ ಶಿವಯೋಗಪ್ಪ ತಳವಾರ, ಶ್ರೀಮತಿ ರೇಣುಕಾ ತಂದೆ ಪೀರಪ್ಪ ಮಾದರ, ಸಿದ್ದಪ್ಪ ಚಂದಪ್ಪ ಪೂಜಾರಿ, ಶ್ರೀಮತಿ ಲಕ್ಷ್ಮೀಬಾಯಿ ತಂದಿ ಸಂಗಪ್ಪ ಮಾದರ, ದುಂಡವ್ವ ಅವ್ವಣ್ಣವ್ವ ಮುತ್ತಗಿ, ಬಾಳಪ್ಪ ಫಕೀರಪ್ಪ ಕಣಮುಚನಾಳ, ಬಸವರಾಜ ಭೀಮಶ್ಯಾ ಹೂಗಾರ, ವಿಠೋಬಾ ರಾಮಚಂದ್ರ ಪೂಜಾರಿ, ರಾಮಪ್ಪ ಸಾಬು ಭಜಂತ್ರಿ, ಕಲ್ಲಪ್ಪ ವೀರಭದ್ರಪ್ಪ ಹೂಗಾರ, ಚಂದ್ರಶೇಖರ ಈರಪ್ಪ ಹಾದಿಮನಿ, ಸಿದ್ದಪ್ಪ ಹನುಮಂತಪ್ಪ ಹೂಗಾರ, ಯಂಕಪ್ಪ ಗದಿಗೆಪ್ಪ ಪೂಜಾರಿ, ಮಲಕಾರಿ ಸಂಕಪ್ಪ ಕಟಗೇರಿ, ಬಸಪ್ಪ ಸಿದ್ದಪ್ಪ ಕಟಗೇರಿ, ಬಸಪ್ಪ ಸಿದ್ದಪ್ಪ ಹಾವಡಿ, ಹನುಮಂತಪ್ಪ ಗೋವಿಂದಪ್ಪ ಹೂಗಾರ, ಸದಾಶಿವ ಬಸಪ್ಪ ಜಮಖಂಡಿ.

**ವಿಜಾಪೂರ ಜಿಲ್ಲೆಯ ಕನ್ನಡ ಜನಪದ 'ಕಥಾಗುಚ್ಛ'**

ಇದು ಡಾ ॥ ಎಂ.ಎಸ್. ವಾಲಿಯವರ ೫೦ ನೇ ಗ್ರಂಥವಾಗಿ ಭುವನೇಶ್ವರಿ ಪ್ರಕಾಶನದ ಹೆಮ್ಮೆಯ ಕೊಡುಗೆಯಾಗಿ ೨೦೦೮ ರಲ್ಲಿ ಪ್ರಕಟಗೊಂಡಿತು. ಮಹಿಳಾ ವಿಶ್ವವಿದ್ಯಾಲಯ

ವಿಜಾಪೂರದ ಕನ್ನಡ ವಿಭಾಗದ ಡಾ ॥ ವಿಜಯಾದೇವಿ ಯವರು ಸೊಗಸಾದ ಮುನ್ನುಡಿ ಬರೆದಿದ್ದಾರೆ.

ಜನಪದ ಕಥೆಗಳನ್ನು ಸೃಷ್ಟಿಸಿದವರು ಬುದ್ಧಿವಂತರಲ್ಲ, ಭಾವಜೀವಿಗಳು. ಹೀಗೆ ಹೇಳಿದಾಗ ಜನಪದರಿಗೆ ಬುದ್ಧಿಯೇ ಇರಲಿಲ್ಲವೆಂದಲ್ಲ. ಅವರ ಬುದ್ಧಿವಂತಿಕೆ ಹಿಂದೆ ಸರಿದು ಭಾವ ಅರಳಿ ಮುಂಚೂಣಿಯಲ್ಲಿ ನಿಂತಿವೆ. ಒಂದೇ ಕಥೆಯು ನಾನಾ ರೂಪದಲ್ಲಿ ಕುಡಿಯೊಡೆದುದು ಕಂಡು ಬರುತ್ತದೆ. ಕಥೆಗಳಿಗೆ ಇತಿ-ಮಿತಿಗಳೆಂಬುದುದಿಲ್ಲ. ಕಥೆ ಸರ್ವವ್ಯಾಪಿಯಾಗಿದೆ. ನಾಟಕದಲ್ಲಿ ಕಥೆಯ ಹಂದರವಿದೆ. ಹಾಡು-ಲಾವಣಿಗಳಲ್ಲಿ ಕಥೆ ಇದ್ದೇ ಇರುವುದು. ಕೆಲವು ಕಥೆಗಳು ಗೀತಗಳಾಗಿ ಕಾಣಿಸಿಕೊಂಡರೆ ಮತ್ತೆ ಕೆಲವು ಗೀತೆಗಳು ಕಥೆಯ ರೂಪವನ್ನು ತಾಳಿವೆ. ಉತ್ತಮ ಕಥೆಯನ್ನು ಜನತೆಗೆ ದಯಪಾಲಿಸುವ ಕಥೆಗಾರ ಸಾಹಿತ್ಯದ ಬರಹ ರೂಪದಲ್ಲಿ ತನ್ನ ಸಾಮರ್ಥ್ಯವನ್ನೂ ತೋರಿಸಬೇಕಾದುದರಿಂದ ಕಥೆ ಹೇಳುವ ಪದ್ಧತಿಯನ್ನು ತಿಳಿದುಕೊಂಡು ಸುಂದರ ಕಥನ ಕೌಶಲ್ಯದಿಂದ ತನ್ನ ಪ್ರತಿಭಾ ಮುದ್ರೆಯನ್ನೊತ್ತಿ ಸೃಷ್ಟಿಯಲ್ಲಿ ಅಡಗಿದ ಸತ್ಯವನ್ನು ಕಲ್ಪನೆಯ ಬೆಳಕಿನಲ್ಲಿ ಛಾಯಾ ಚಿತ್ರದಂತೆ ಪ್ರದರ್ಶಿಸಬೇಕಾಗುತ್ತದೆ.

'ವಿಜಾಪೂರ ಜಿಲ್ಲೆಯ ಕನ್ನಡ ಜನಪದ ಕಥಾಗುಚ್ಛ' ಈ ಸಂಕಲನದಲ್ಲಿ ೫೦ ಕಥೆಗಳಿವೆ. ಇಲ್ಲಿ ಕಥೆಗಳನ್ನು ವಿಸ್ತಾರವಾದ ಪ್ರಸ್ತಾವನೆಯೊಂದಿಗೆ ಡಾ. ಎಂ.ಎಸ್. ವಾಲಿಯವರವು ೧) ಬುದ್ಧಿವಂತಿಕೆಯ ಕಥೆಗಳು, ೨) ನೀತಿಕಥೆಗಳು, ೩) ವಿನೋದ ಕಥೆಗಳು, ೪) ಅತಿಮಾನುಷ ಕಥೆಗಳು, ೫) ವಾಸ್ತವಿಕ ಕಥೆಗಳು ಎಂಬ ಐದು ವಿಭಾಗಗಳಲ್ಲಿ ವಿಂಗಡನೆ ಮಾಡಿದ್ದಾರೆ. ಈ ದೃಷ್ಟಿಯಿಂದ ಅಧ್ಯಯನಕ್ಕೆ ತುಂಬ ಅನುಕೂಲವಾಗಿದೆ. ಕಥೆ ಎಂಬ ಶಬ್ದವು ಕಥೆ ಎನ್ನುವ ಸಂಸ್ಕೃತದ ಧಾತುವಿನಿಂದ ಹುಟ್ಟಿದೆ ಎಂದು ಹೇಳಿ, ಕಥೆ ಎಂದರೆ ಹೇಳುವುದು. ಘಟನೆಯನ್ನು ವಿವಿಧ ಘಟನಾವಳಿಗಳನ್ನು ಸ್ವಾರಸ್ಯಕರವಾಗಿ ಹೇಳುವುದೇ ಕಥೆಯಾಗಿ ಬೆಳೆದು ಬಂದಿದೆ ಎಂದು ವಿವರಿಸಿದ್ದಾರೆ. ಜಾನಪದ ಕಥೆಗಳನ್ನು ಓದುಗ ಸಮೂಹಕ್ಕೆ, ಮಕ್ಕಳಿಗೆ, ಕಥಾಪ್ರಿಯರಿಗೆ ಓದಲು ಸಂಕಲಿಸಿಕೊಟ್ಟು ಡಾ ॥ ಎಂ.ಎಸ್. ವಾಲಿ ಯವರು ತುಂಬ ಒಳ್ಳೆಯ ಕೆಲಸ ಮಾಡಿದ್ದಾರೆ. ಓದುವ ಮಕ್ಕಳಿಗೆ ಇನ್ನಷ್ಟು ಒಳ್ಳೆಯ ಗುಣವಂತರಾಗಲು ಇಂಥಹ ಕಥೆಗಳ ಅವಶ್ಯಕತೆಯಿದೆ ಎಂಬುದನ್ನು ಮನಗಂಡು ಈ ಸಂಕಲನವನ್ನು ತಂದಿದ್ದಾರೆ. ಡಾ ॥ ಎಂ.ಎಸ್. ವಾಲಿಯವರಂತಹ ವಿದ್ವಾಂಸರು ನಮ್ಮ ಕನ್ನಡ ವಿದ್ವತ್ ಪರಂಪರೆಗೆ ಒಂದು ಶೋಭೆಯಾಗಿದ್ದಾರೆ.

ಇಲ್ಲಿನ ಕಥೆಗಳು ಆಯಾ ಕಾಲದ ಒತ್ತಡದಿಂದ ರೂಪುಗೊಂಡ ಕಥೆಗಳಾಗಿವೆ. ಇವು ಮುಖ್ಯವಾಗಿ ಹೇಳಿದ ಕಥೆಗಳಾದುದರಿಂದ ಕೇಳುವ ಶ್ರೋತ್ರಗಳು ಮಕ್ಕಳು ಇದ್ದೇ ಇದ್ದರು. ಕಥೆ

ಹೇಳುವ, ಕಥೆ ಕೇಳುವ ಕ್ರಿಯೆ ವಿಶ್ವದ ಎಲ್ಲಾ ಭಾಗದಲ್ಲೂ ಇದೆ. ಇದು ಮನುಷ್ಯನ ಮೂಲಭೂತ ಆಸಕ್ತಿ, ಸಂಸ್ಕೃತಿಯ ಹರಿಕಾರರಾಗಿ ಕಥಿಸುವವರ ಪಾತ್ರ ತುಂಬ ದೊಡ್ಡದು. ಡಾ. ವಾಲಿಯವರು ಈ ಕೃತಿಯಲ್ಲಿ ಕಥೆ ಹೇಳಿದವರ ವಿವರಗಳನ್ನು ನೀಡುವುದರ ಮೂಲಕ ಅವರ ಇತಿಹಾಸವನ್ನು ದಾಖಲಿಸಿದ್ದಾರೆ. ಇವರೆಲ್ಲರೂ ಬಹುತೇಕ ವಿಜಾಪೂರ ಜಿಲ್ಲೆಯವರಾಗಿದ್ದು ಇವರಲ್ಲಿ ಮೂವರು ಮಹಿಳೆಯರಿದ್ದಾರೆ. ವಿಜಾಪೂರ ಜಿಲ್ಲೆಯ ಕಥೆಗಳೆಂದೇ ಇದಕ್ಕೆ ಹೆಸರಿಸಿರುವುದು ಸೂಕ್ತವಾದುದಾಗಿದೆ. ಇಲ್ಲಿಯ ಭಾಷೆಯೂ ಕೂಡ ಜಿಲ್ಲೆಯ ವೈಶಿಷ್ಟ್ಯವನ್ನು ತಿಳಿಸುವುದಾಗಿದೆ. ಇದಕ್ಕನುಗುಣವಾಗಿ ವಾಲಿಯವರು ಕೃತಿಯ ಕೊನೆಯಲ್ಲಿ ಜಾನಪದ ಶಬ್ದಗಳ ಅರ್ಥವನ್ನೂ ಕೊಟ್ಟಿದ್ದಾರೆ.

'ಬುದ್ಧಿವಂತಿಕೆಯ ಕಥೆಗಳು' ವಿಭಾಗದಲ್ಲಿ ಹನ್ನೊಂದು ಕಥೆಗಳಿದ್ದು ಇವು ಬುದ್ಧಿಗೆ ಚುರುಕು ಮುಟ್ಟಿಸುವುದವುಗಳಾಗಿವೆ. ಬುದ್ಧಿವಂತಿಕೆಯು ಕೇವಲ ಪುರುಷರಲ್ಲಿ ಮಾತ್ರ ಇರುವುದು ಎನ್ನುವ ನಂಬಿಕೆಯನ್ನು ಇಲ್ಲಿಯ ರತ್ನದ ಹಳ್ಳ, ಮುತ್ತು ಕೊಟ್ಟು ಗೊಂಬೆ ಕೊಂಡವಳೆ . . . . ಚತುರ ಸೊಸೆಯಂದಿರು ಮೊದಲಾದ ಕಥೆಗಳು ಸುಳ್ಳು ಮಾಡಿವೆ. ಬದುಕನ್ನು ಸುಂದರ ಮಾಡಿಕೊಳ್ಳಲು ಪುರುಷ ಮಹಿಳೆ ಇಬ್ಬರಿಗೂ ವಿವೇಕ ಮುಖ್ಯ ಎಂಬುದನ್ನು ಈ ಭಾಗದ ಕಥೇಗಳು ನಿರೂಪಿಸುತ್ತವೆ. ಇದರ ಜೊತೆಗೆ ಮಾನವೀಯ ಸ್ಪಂದನ ಇದ್ದರಂತೂ ಜನ ಸಮುದಾಯದ ಉದ್ಧಾರ ಸಾಧ್ಯವಿದೆ ಎಂಬುದನ್ನು 'ಭಾಗ್ಯವಂತ ಕನಕಪ್ಪ' ಕಥೆ ಸಾರುತ್ತದೆ. ಕನಕಪ್ಪ ಒಬ್ಬ ಜ್ಯೋತಿಷಿಯ ಮಗ. ಈ ಕನಕಪ್ಪ ತಂದೆ ಇದ್ದಾಗ ಒಳ್ಳೆಯ ಮಗನಾಗಿ ಬೆಳೆಯಲಿಲ್ಲ. ತಂದೆ ಕಾಲವಾದ ಮೇಲೆ ತಾಯಿ ಮಗನಿಗೆ ಜವಾಬ್ದಾರಿಯ ಬಗ್ಗೆ ಹೇಳುತ್ತಾಳೆ. ತಾಯಿಯ ಮಾತು ಮನಸ್ಸಿಗೆ ನಾಟಿ ಆತ ಜ್ಯೋತಿಷ್ಯದ ಕಡೆಗೆ ಹೊರಳುತ್ತಾನೆ. ಈ ಕಾರಣವಾಗಿ ನಿಧಿ ಸಿಗುತ್ತದೆ. ಇಲ್ಲಿಂದ ಅವನು ಬದುಕಿನಲ್ಲಿ ಕ್ರಿಯಾತ್ಮಕವಾಗಿ ಪ್ರಗತಿಯತ್ತ ಸಾಗುವುದನ್ನು ಭಾಗ್ಯವಂತ ಕನಕಪ್ಪ ಕಥೆ ಹೇಳುತ್ತದೆ. ಅವನು ಎಷ್ಟು ಪ್ರಬುದ್ಧನಾಗುತ್ತಾನೆ ಎಂದರೆ ಮಹಾರಾಜನಾಗುವ ಅವಕಾಶ ದೊರೆತರೂ ಯೋಗ್ಯ ಮಹಾರಾಜನನ್ನು ಮನುಷ್ಯತ್ವದ ನೆಲೆಯಲ್ಲಿ ಆಯ್ಕೆ ಮಾಡುವ ಪ್ರಕ್ರಿಯೆಯವರೆಗೆ ಬೆಳೆಯುತ್ತದೆ. ಈತನ ಮಾನವೀಯ ಸ್ಪಂದನ ರಾಜನಾಗುವ ಆಯ್ಕೆಯನ್ನು ನಿರ್ಧರಿಸುತ್ತದೆ. ರಾಜನಿಗೆ ಜನಸ್ಪಂದನ ಗುಣ ಇರಬೇಕು ಎಂಬುದು ಇಲ್ಲಿನ ಆಶಯ. ಬುದ್ಧಿವಂತರಾಗುವುದರ ಜೊತೆಗೆ ಅವರಲ್ಲಿ ಮಾನವೀಯ ಸ್ಪಂದನವೂ ಇರಬೇಕು ಎಂಬುದರ ಕಡೆಗೆ ಇದರ ಒತ್ತು ಇದೆ. ಬುದ್ಧಿವಂತ ಭಾಗ್ಯವಂತ ಕಥೆಯ ನಾಯಕ ಚೆನ್ನಪ್ಪ ಇವನು ಮಹಾ ಸೋಮಾರಿ. ದುಡಿಮೆ ಮಾಡು, ದುಡಿದು ತಾ ಎಂದು ತಾಯಿ ಹೇಳುತ್ತಿರುತ್ತಾಳೆ. ತಾಯಿಯಿಂದ ಬುತ್ತಿ ಕಟ್ಟಿಸಿಕೊಂಡು ಹೊರಟವನು ಹಣ್ಣು

ಮಾರುವ ಅಜ್ಜಿಯ ಹಣ್ಣಿನ ಬುಟ್ಟಿಯನ್ನು, ಬಟ್ಟೆ ಒಗೆಯುವ ಹುಡುಗಿಯರ ಬಟ್ಟೆಗಳನ್ನೂ, ಕುದುರೆ ಮತ್ತು ಸಂಪತ್ತು, ಅಜ್ಜಿಯ ಮೊಮ್ಮಗಳು ಇವರನ್ನೆಲ್ಲ ಹಾರಿಸಿಕೊಂಡು ಬರುತ್ತಾನೆ. ಇವನ ಶ್ರೀಮಂತಿಕೆ ಬಂದುದು ಹೀಗೆ. ಇದು ತಾಬಿಗೆ ಬೆರಗು! ಇಂತಹ ಕಥೆ ಏನು ಹೇಳುತ್ತದೆ? ನಮ್ಮ ಸಮಕಾಲೀನರಲ್ಲಿ ಕೆಲವರು ಹೀಗೆಯೇ ಶ್ರೀಮಂತರಾದರೇನು? ಎನ್ನುವ ಪ್ರಶ್ನೆ ಹಾಕುತ್ತದೆ. ಇಂತಹ ಕಥೆಗಳ ಆಶಯ ಏನು? ಬುದ್ಧಿವಂತ ಕಥೆಗಳ ಮಾಲಿಕೆಗೆ ಇವು ಹೊಂದುವುದಿಲ್ಲ ಎನಿಸುತ್ತದೆ. ಬುದ್ಧಿವಂತರು ಯಾರು? ವಿವೇಕಿಗಳಿಗೆ ಬುದ್ಧಿವಂತರು ಎನ್ನಲಾಗುತ್ತದೆ. ದೋಚುವವರನ್ನು ವಂಚಕರು ಎನ್ನಲಾಗುತ್ತದೆ. ಬುದ್ಧಿವಂತ ಭಾಗ್ಯವಂತ ಕಥೆಯು ಈ ವಿಭಾಗದಿಂದ ಬೇರೆ ವಿಭಾಗಕ್ಕೆ ಸರಿಸಿದ್ದರೆ ಒಳ್ಳೆಯದಿತ್ತು ಎನ್ನುವ ಡಾ ॥ ವಿಜಯಾದೇವಿ ಯವರ ಅಭಿಪ್ರಾಯ ಸರಿಯಾಗಿದೆ.

ಜನಪದ ಸಾಹಿತ್ಯದಲ್ಲಿ ನೀತಿಕಥೆಗಳು ಮತ್ತು ಅತಿಮಾನುಷ ಕಥೆಗಳು ಹೇರಳವಾಗಿವೆ. ವ್ಯಕ್ತಿ ಮತ್ತು ಸಮಷ್ಟಿಯ ಬದುಕು ವಿಕೃತಿಗಳಿಂದ ದೂರವಿರಿಸಲು ನೀತಿಯ ಪಾತ್ರ ದೊಡ್ಡದು. ಎಲ್ಲ ಕಾಲಕ್ಕೂ ಇದರ ಮಹತ್ವವಿದೆ. ಎಲ್ಲಿಯ ವರೆಗೆ ಪುರುಷ-ಮಹಿಳೆ, ಯುವಕ-ವೃದ್ಧರು, ಬಡವ-ಬಲ್ಲಿದರು ಕೂಡಿ ಬಾಳುವರೋ ಅಲ್ಲಿಯ ವರೆಗೆ ಶಾಂತಿ, ಸಾಮರಸ್ಯ, ಸಮಾಧಾನಗಳನ್ನೂ ಪ್ರತಿಪಾದಿಸುವಲ್ಲಿ ನೀತಿಯ ಪಾತ್ರ ದೊಡ್ಡದಾಗಿದೆ. ಇಲ್ಲಿ ೧೪ ನೀತಿ ಕಥೆಗಳಿವೆ. ಅತಿಮಾನುಷ ವಿಭಾಗದಲ್ಲಿ ೭ ಕಥೆಗಳಿವೆ. ಮಕ್ಕಳಲ್ಲಿ ಸಾಹಸ ಮನೋಧರ್ಮವನ್ನು ಬೆಳೆಸುವಲ್ಲಿ ಇಲ್ಲಿಯ ಅತಿಮಾನುಷ ಕಥೆಗಳು ಪೂರಕವಾಗಿವೆ. ವಿನೋದವು ಆನಂದಭಾವದ ಒಂದು ಭಾಗವಾಗಿದೆ. ತಾನೂ ನಕ್ಕು ಇತರರನ್ನೂ ನಗಿಸುವ ವಾತಾವರಣ ಇಂದು ಮಾಯವಾಗುತ್ತಿರುವ ಸಂದರ್ಭದಲ್ಲಿ ಇಲ್ಲಿರುವ ೧೩ ವಿನೋದ ಕಥೆಗಳು ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ. ಕಥೆಯನ್ನು ಎಷ್ಟು ಚಿಕ್ಕದಾಗಿ ಹೆಣೆಯಬಹುದು ಎನ್ನುವುದಕ್ಕೆ ಇಲ್ಲಿಯ ಹ್ಞೂ ಅಂದ್ರೆ ಬರ್‍ತಾದ? ಎಂಬ ಕಥೆ ಸಾಕ್ಷಿಯಾಗಿದೆ.

ಇಲ್ಲಿನ ಕೆಲವು ಕಥೆಗಳು ಈಗಾಗಲೇ ಜನಪ್ರಿಯ ಮಾದರಿಯ ಕಥೆಗಳನ್ನು ಅನುಸರಿಸಿ ಕಟ್ಟಿದ ಕಥೆಗಳಾಗಿವೆ. ಉದಾಹರಣೆಗೆ ಇಲ್ಲಿ ಎರಡು ಕಥೆಗಳನ್ನು ಹೆಸರಿಸಬಹುದು. ರತ್ನದ ಹಳ್ಳ ಎಂಬ ಕಥೆಯು ವಡ್ಡಾರಾಧನೆಯ ನಂದಿಮಿತ್ರನ ಕಥೆಯಲ್ಲಿ ತಳವಾರನ ಮಗಳು ಸುಜಾತ ಕಳ್ಳನನ್ನು ಹಿಡಿದುಕೊಟ್ಟ ಕಥೆಯ ತಿರುಳೇ ಆಗಿದೆ. ನೀಚ ಸಿಂಗವ್ವನಂತಹ ಕಥೆಗಳು ಈಗಾಗಲೇ ಸಾಕಷ್ಟು ಬೇರೆ ಬೇರೆ ರೂಪಾಂತರದಲ್ಲಿ ಬಂದಿವೆ. ಹಿಂಸೆ ಕೊಟ್ಟು ಇನ್ನೊಬ್ಬರನ್ನೂ ಕೊಲ್ಲಲು ಪ್ರಯತ್ನಿಸಿದರೆ ಅದು ತಿರುಗುಬಾಣವಾಗಿ ನಿಮ್ಮನ್ನೇ ತೆಗೆದುಕೊಳ್ಳುತ್ತದೆ ಎನ್ನುವುದು ಈ ಕಥೆಯ ಆಶಯ. ಮನುಷ್ಯ ಒಳ್ಳೆಯವನಾಗಿ ಬಾಳಬೇಕು ಎಂಬುದೇ ಇಲ್ಲಿನ ಕಥೆಗಳ ತಿರುಳಾಗಿದೆ.

ಒಟ್ಟಾರೆ ನಮ್ಮ ಜಾನಪದ ಪರಂಪರೆಯಲ್ಲಿ ಕಥೆಯ ಸಾಹಿತ್ಯ ರಾಶಿರಾಶಿಯಾಗಿ ದೊರೆಯುತ್ತದೆ. ಅಜ್ಜಿ ಹೇಳುವ ಮಕ್ಕಳ ಕಥೆಯನ್ನು ಮೊದಲುಗೊಂಡು ವೇದಾಂತ ತತ್ವಗಳನ್ನು ಬೋಧಿಸುವ ಪೌರಾಣಿಕ ಕಥೆಗಳ ವರೆಗೆ ವಿವಿಧ ರೂಪಗಳು ಇದರಲ್ಲಿ ಕಂಡು ಬರುತ್ತವೆ. ಬಿಡುವಿನ ವೇಳೆಯಲ್ಲಿ ಮನರಂಜನೆಯನ್ನೂ ಉಂಟುಮಾಡಿಕೊಳ್ಳುವುದು. ಪ್ರಪಂಚ ಜ್ಞಾನವನ್ನು ವಿಸ್ತರಿಸಿಕೊಳ್ಳುವುದು, ನೀತಿ-ತತ್ವ, ಧರ್ಮ-ದರ್ಶನಗಳಲ್ಲಿ ಜಿಜ್ಞಾಸೆಯನ್ನೂ ಹೊಂದುವುದು. ಈ ಮೊದಲಾದ ಕಾರಣಗಳಿಂದ ಜಾನಪದ ಕಥಾಲೋಕ ವಿಸ್ತಾರಗೊಂಡಿದೆ. ಈ ಕಥೆಗಳಲ್ಲಿ ಜನಮನವನ್ನೂ ಆಕರ್ಷಿಸುವ ಯಾವುದೋ ಒಂದು ವಿಶೇಷ ಮಾಯೆ ಇದೆ. 'ಆಹ್ಲಾದವೇ ಕಥೆಯ ಕೇವಲ ಪ್ರಯೋಜನವಲ್ಲ ಆತ್ಮೋದ್ಧಾರ, ಆತ್ಮಸಂಸ್ಕಾರ, ಆತ್ಮವಿಕಾಸ ಇವೂ ಕಥೆಯ ಗುರಿ' ಎನ್ನುವ ಡಾ. ದೇ. ಜವರೇಗೌಡ ಅವರ ಮಾತು ಸತ್ಯವಾಗಿದೆ.

ಜನಪದ ಕಥೆಗಳ ಕುರಿತು ಅಧ್ಯಯನಶೀಲ ವಿಮರ್ಶೆ, ವಿಶ್ಲೇಷಣೆ ಇಂದು ಬಾರದಿದ್ದುದು ಒಂದು ಕೊರತೆಯೇ ಆಗಿದೆ. ಜಾನಪದ ಕಥೆಗಳ ಬಗ್ಗೆ ವ್ಯಾಪಕವಾದ ವಿಮರ್ಶೆ, ಚರ್ಚೆ ನಡೆದೇ ಇಲ್ಲ. ಹಾಗೆಯೇ ಜನಪದ ಕಥಾ ಸಂಕಲನಗಳೂ ನಿರೀಕ್ಷಿತ ಸಂಖ್ಯೆಯಲ್ಲಿ ಬಂದಿಲ್ಲವೆಂದೇ ಹೇಳಬೇಕು. ಇಂತಹದೊಂದು ಕೊರತೆಯನ್ನು ಡಾ. ಎಂ.ಎಸ್. ವಾಲಿಯವರು ತಮ್ಮ ಈ ವಿಜಾಪೂರ ಜಿಲ್ಲೆಯ ಕನ್ನಡ ಜನಪದ ಕಥಾಗುಚ್ಛ' ಸಂಕಲನದ ಮುಖಾಂತರ ಸ್ವಲ್ಪಮಟ್ಟಿಗಾದರೂ ನೀಗಿಸಿದ ಸಾರ್ಥಕತೆ ಕಂಡು ಬರುತ್ತದೆ.

## ಅಧ್ಯಾಯ – ೬

**ಸಮಾರೋಪ :**

ಕಾವ್ಯ ಕವಿಯ ಪಿಸುಮಾತಿನ ಆತ್ಮವೆನಿಸಿಕೊಂಡಂತೆ, ಸಾಹಿತ್ಯ ಸಾಹಿತಿಯ ವಿಶಾಲ ಚಿಂತನೆಗೆ ಒಳಪಟ್ಟ ಸಾಗರದಂತೆ, ಅಂತೆಯೇ ಜನಪದ ಸಾಹಿತ್ಯ ಪ್ರಕಾರ ತನ್ನದೇಯಾದ ಆಶಯ, ಅಭಿವ್ಯಕ್ತಿ ಧೋರಣೆಯನ್ನೂ ಇಟ್ಟುಕೊಂಡು ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಜನಪದೀಯ ನೆಲೆಗಟ್ಟಿನ ಮೇಲೆ ವಿಭಿನ್ನ ನೆಲೆಯಲ್ಲಿ ಕಾಣಿಸಿಕೊಂಡಿದೆ. ಜಾನಪದ ಸಾಹಿತ್ಯದ ಪ್ರಕಾರ ಅದರದ್ದೇಯಾದ ಮಹತ್ವ, ಸ್ವರೂಪವನ್ನು ಹುಟ್ಟು ಹಾಕುವಲ್ಲಿ, ಬದಲಾವಣೆಯ ಕಾಲದಲ್ಲಿಯೂ ಈ ಸಾಹಿತ್ಯ ಪ್ರಕಾರವನ್ನು ಉಳಿಸುವ ನಿಟ್ಟಿನಲ್ಲಿ ಅನೇಕ ಜನಪದ ತಜ್ಞರು, ಸಾಹಿತಿಗಳು ಕಾಲಕಾಲಕ್ಕೆ ಮಾಡಿದ ಕಾರ್ಯ ಅಪರೂಪ, ಅನಂತ. ಇಂತಹ ತಜ್ಞ, ಸಾಹಿತಿಗಳ, ಚಿಂತಕರ ಸಾಲಿಗೆ ಸೇರಿ ೭೫ ವರ್ಷಗಳ ಕಾಲ ಜನಪದ ಸಾಹಿತ್ಯ, ಸಂಪದನಾ, ಪ್ರಕಟಣಾ, ಸೇವಾಕಾರ್ಯದಲ್ಲಿ ದಣಿವರಿಯದೇ ತಮ್ಮನ್ನು ತೊಡಗಿಸಿಕೊಂಡಿರುವ ಡಾ. ಎಂ.ಎಸ್. ವಾಲಿಯವರು ಹೊರತಾಗಿಲ್ಲ. ಉಪನ್ಯಾಸ, ಲೇಖನ, ಜನಪದ ಸಂಗ್ರಹ, ಸಂಪಾದನೆ, ಕಥಾಸಾಹಿತ್ಯ, ಕಲೆಗಾರರ ಜೀವನ ಕುರಿತಾದ ಸಾಹಿತ್ಯ ಹೀಗೆ ಹಲವಾರು ವಿಭಿನ್ನ ಪ್ರಕಾರದ ಸಾಹಿತ್ಯ ಕೃಷಿಯನ್ನು ಮಾಡಿದ ಶ್ರೇಷ್ಠಮಟ್ಟದ ಸಾಹಿತಿಗಳಾಗಿ ವಿಭಿನ್ನವಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಡಾ.ಎಂ.ಎಸ್. ವಾಲಿ ಅವರು ಕಂಡುಕೊಂಡ ಸಾಹಿತ್ಯ ಕ್ಷೇತ್ರ ಕೇವಲ ಜನಪದ ಕ್ಷೇತ್ರಕ್ಕೆ ಸೀಮಿತವಾಗಿರದೇ ಹಲವು ಪ್ರಕಾರಗಳಲ್ಲಿ ಮುಂದುವರೆದಿದೆ. ಅದು ಇಲ್ಲಿ ಮುಖ್ಯವಾಗಿರದೇ ಕೃತಿಗಳ ಸತ್ವ, ವಿಚಾರಶೀಲತೆ, ಆಶಯ, ಸಾಂಸ್ಕೃತಿಕ ಹಿನ್ನೆಲೆ, ಪ್ರಾದೇಶಿಕತೆ ಮಹತ್ವದ್ದಾಗಿದೆ. ಈ ನಿಟ್ಟಿನಲ್ಲಿ ಈ ಅಧ್ಯಯನದಲ್ಲಿ ಕೇವಲ ಕೆಲವು ಕೃತಿಗಳನ್ನು ಜನಪದ, ಸಂಪಾದನಾ ಹಿನ್ನಲೆಯ ಚೌಕಟ್ಟಿನಲ್ಲಿ ಹಿಡಿದಿಟ್ಟು ನನ್ನದೇ ಆದ ಒಂದು ರೂಪವನ್ನು ನೀಡಿದ್ದೇನೆ. ಅವುಗಳನ್ನು ಈ ಕೆಳಕಂಡಂತೆ ಕಂಡುಕೊಂಡದ್ದೇನೆ.

೧. ೧೯೭೪ ರಿಂದ ಈಚೆಗೆ ಆರಂಭವಾದ ಜಾನಪದ ಕೃಷಿಯನ್ನು ಒತ್ತಟ್ಟಿಗೆ ಕಟ್ಟಿಕೊಡುವುದಾಗಿದೆ. ಕಾರಣ ಅವರ ಸಂಪಾದನಾ ಸಾಹಿತ್ಯದ ಆಳ ಪಾಂಡಿತ್ಯ ಬಹು ಶ್ಲಾಘನೀಯವಾಗಿದೆ. ಹಲಸಂಗಿ ಗೆಳೆಯರು, ಸಿಂಪಿಲಿಂಗಣ್ಣ ಹಾಗೂ ಮಧುರ ಚೆನ್ನರ ಪ್ರೇರಣೆಯಿಂದ ಅದೇ ಪರಂಪರೆ ಮುಂದುವರೆದದ್ದು ಕಂಡು ಬರುತ್ತದೆ.

೨. ಜ್ಞಾನವನ್ನು ಬೋಧಿಸುವ ಜ್ಞಾನದ ನಿಧಿಯಾಗಿ 'ಡಂಗುರ ಪದಗಳು' ಕೃತಿ ಹೊರಹೊಮ್ಮಿದೆ. ಜನ ಸಾಮಾನ್ಯರ ಕೈ ಬಾಯಿಗೆ ಸಿಕ್ಕು ತುಂಬ ಅಶುದ್ಧ ರೂಪದಲ್ಲಿ ಪ್ರಚಾರ ಪಡೆದುಕೊಳ್ಳುವಂತಹ ಸಂದರ್ಭದಲ್ಲಿ ಇಂತಹ ವಿಶಿಷ್ಟ ಸಾಹಿತ್ಯದ ಸಂಗ್ರಹ ಮಾಡಿದ ಶ್ರೇಯಸ್ಸು ಡಾ॥

ಎಂ.ಎನ್. ವಾಲಿಯವರಿಗೆ ಸಲ್ಲುತ್ತದೆ. ಈ ಗ್ರಂಥದ ಮುಖಾಂತರ ವಾಲಿಯವರು ನೈತಿಕ ಮೌಲ್ಯವನ್ನು ಎತ್ತಿ ಹಿಡಿಯುವ ಕಾರ್ಯ ಮಾಡಿದ್ದಾರೆಂದು ಕಂಡು ಬರುತ್ತದೆ.

ವೈಜ್ಞಾನಿಕ ಯುಗದಲ್ಲಿ ಅತ್ಯವಸರದ ಬದುಕಿನಲ್ಲಿ ಸಾಂಪ್ರದಾಯಿಕ ಆಚರಣೆಗಳು ಅಳಿವಿನ ಅಂಚಿನಲ್ಲಿದ್ದುದನ್ನು ಕಂಡು ಉಳಿಸಿಕೊಳ್ಳುವ ನಿಟ್ಟಿನಲ್ಲಿ ನಮ್ಮ ಸಂಸ್ಕೃತಿಯ ಜೀವಂತ ಸಂಪನ್ಮೂಲದ ಭಾಗವಾಗಿ 'ಒಡಪುಗಳು' 'ಒಗಟುಗಳ' ಸಂಗ್ರಹ ಕಂಡು ಬಂದಿವೆ. ಎಲೆಯ ಮರೆಯ ಕಾಯಿಯಂತೆ ಬಾಳಿಹೋದ ಜನಪದರ ಅಧ್ಯಯನಗಳು ಇಂದು ನಡೆಯುವ ಅವಶ್ಯಕತೆಯಿದೆ. ಇಂತಹ ಸಂದರ್ಭದಲ್ಲಿ 'ಶರಣಸ್ಮೃತಿ' ಎಂಬ ಕೃತಿ ಎಲೆಯ ಮರೆಯ ಹೂವಿನಂತೆ ಸುವಾಸನೆ ಬೀರಿದ 'ಶರಣಪ್ಪ ವಾಲಿ' ಯವರನ್ನೂ ಕುರಿತು ಸಂಗ್ರಹಿಸಿದ ಮಾಹಿತಿ, ಹೇಳಿದ ರೀತಿ ಎಲ್ಲವೂ ಒಳ್ಳೆಯ ಸಂಗತಿಗಳಾಗಿವೆ. ಸಮಾಜಕ್ಕೆ ಪರಿಚಯವಿರದ ಅದೆಷ್ಟೋ ವ್ಯಕ್ತಿಗಳು ನಮ್ಮಲ್ಲಿದ್ದಾರೆ. ಅಂತಹವರ ಅಧ್ಯಯನ ಕೈಕೊಳ್ಳುವವರಿಗೆ ಶ್ರೀಯುತರದು ಪ್ರೇರಣಾತ್ಮಕ ಅಂಶವಾಗಿ ಈ ಅಧ್ಯಯನದಲ್ಲಿ ಕಂಡು ಬಂದಿದೆ. ಶಿವಶರಣ ಮೇದಾರ ಕೇತಯ್ಯನ ಸಮಗ್ರ ಜೀವನ ಚರಿತ್ರೆಯನ್ನೂ ಸಂಶೋಧನೆ ಮಾಡುವವರಿಗೆ ವಾಲಿಯವರ 'ಶಿವಶರಣ ಮೇದಾರ ಕೇತಯ್ಯ' ಕೃತಿ ಪ್ರಥಮ ಹಂತದ ಮಾರ್ಗದರ್ಶನ ಕೃತಿಯಾಗಿ ಪರಿಣಮಿಸಿ ಸ್ಫೂರ್ತಿಯನ್ನು ತುಂಬುತ್ತದೆ. ವಿಜಾಪುರ ಜಿಲ್ಲೆಯನ್ನು ಜಾನಪದದ ತವರೂರು ಎಂಬುದನ್ನು ವಾಲಿಯವರು 'ದುಂಡುಮಲ್ಲಿಗೆ ಹೂವ ಬುಟ್ಟೀಲಿ ಬಂದಾವ' ಎಂಬ ಸಂಗ್ರಹದಿಂದ ಮತ್ತೊಮ್ಮೆ ನಿರೂಪಿಸಿದ್ದಾರೆ. ಈ ಮೂಲಕ ಉತ್ತರ ಕರ್ನಾಟಕದ ಜನಪದ ಗೀತೆಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಇದು ಪ್ರಾದೇಶಿಕ ಅಧ್ಯಯನಕ್ಕೆ ಮಾದರಿಯಾಗಿದೆ. ಜಾನಪದವನ್ನು ಉಳಿಸುವ ಪುಣ್ಯಕಾರ್ಯದಲ್ಲಿ ಅಳಿಲು ಸೇವೆಯೆಂದೇ ಹೇಳಿಕೊಂಡು ಸಂಗ್ರಹಿಸಿದ "ಆಯ್ದು ಗಾದೆಗಳು" ವಾಲಿಯವರ ಆಸಕ್ತಿಗೆ, ಅಧ್ಯಯನಕ್ಕೆ ಸಾಕ್ಷಿಯಾಗಿದೆ. ಜನತೆಯ ಅನುಭವದ ಹೇಳಿಕೆಯ ಸಂಪತ್ತನ್ನು ಗಾದೆಗಳ ಲೋಕದಲ್ಲಿ ಕಾಣುತ್ತೇವೆ. ಕೃಷಿರಂಗ, ವ್ಯವಹಾರ, ದಡ್ಡತನ, ಜಾತೀಯತೆ, ಉಟೋಪಚಾರ, ಹಾಸ್ಯರಸ, ಐತಿಹಾಸಿಕ-ಪೌರಾಣಿಕ ಹೆಣ್ಣುಮಕ್ಕಳಿಗೆ ಸಂಬಂಧಿಸಿದ ವೈವಿಧ್ಯಮಯ ಗಾದೆಗಳನ್ನು ಸಂಗ್ರಹಿಸಿದ್ದಾರೆ. ಸಾಮಾಜಿಕ ಸಾಹಿತ್ಯಿಕ, ಐತಿಹಾಸಿಕ, ಮಾನಸಿಕವಾದ ಭಾವನೆಗಳಿಂದ ಕೂಡಿದ ಮನುಷ್ಯ ಬದುಕಿನ ವಿಶಿಷ್ಟತೆಗಳನ್ನೂ ಅಧ್ಯಯನ ಮಾಡುವವರಿಗೆ ಈ ಕೃತಿ ಸವಾಲಾಗಿ ಪರಿಣಮಿಸಿದೆ. ಎಂದೆಂದೂ ಗುಣುಗುಣಿಸಲು ಕಾರಣವಾಗಿರುವ ಜನಪದ ಹಾಡುಗಳ ಸಂಕಲನ "ಸಾವಿರದ ಜನಪದ ಗೀತೆಗಳು", ಜೀವನದ ಪ್ರತಿಬಿಂಬವನ್ನು, ಜೀವನ ಮೌಲ್ಯಗಳನ್ನು ಎತ್ತಿ ತೋರಿಸುವ ಗೀತೆಗಳ ಸಂಕಲನ ಇದಾಗಿದೆ. ವಿವಿಧ ಪ್ರಕಾರದ ಸಂಗ್ರಹ ಸಂಪಾದನೆಯನ್ನೂ ಈ ಅಧ್ಯಯನದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

೩. ‘ಜನಪದ ಜೀವಾಳ’ ‘ಲೇಖನ ಸಂಪದ’ ‘ಕೃಷಿ ಜನಪದ’ ಕೃತಿಗಳಲ್ಲಿ ಕಂಡು ಬರುವ ಲೇಖನ, ವಿಷಯಗಳೆಲ್ಲ ಜಾನಪದೀಯ ನೆಲೆಯಿಂದಲೇ ರೂಪುಗೊಂಡುದುದು ಕಂಡು ಬರುತ್ತದೆ. ಈ ಕೃತಿಗಳಲ್ಲಿ ಕಂಡು ಬರುವ ವಿಚಾರಗಳು ಜನಪದರ ಸಾಂಸ್ಕೃತಿಕ ಜೀವನ, ಕರಕುಶಲತೆ, ಜೀವನ ಮೌಲ್ಯಗಳು, ಸಾಂಪ್ರದಾಯಿಕ ಆಚರಣೆ ಮುಂತಾದ ವಿಷಯಗಳನ್ನು ಕುರಿತು ಮರು ಚಿಂತನ, ಅಧ್ಯಯನ ಮಾಡಲು ಅವಕಾಶ ಒದಗಿಸಿವೆ.

೪. ಆಧುನಿಕತೆಯ ಪ್ರಭಾವದಿಂದ ಜನಪದ ಸಾಹಿತ್ಯ ಮತ್ತು ಕಲೆ ಇಂದು ಅವನತಿಯ ಅಂಚಿನಲ್ಲಿವೆ. ಆಧುನಿಕ ಮಾಧ್ಯಮಗಳ ಪ್ರಭಾವಕ್ಕೆ ಸಿಲುಕಿ ಮೂಲೆಗುಂಪಾಗುತ್ತಿವೆ. ಇಂತಹ ಅಮೂಲ್ಯ ಸಂಪತ್ತನ್ನು ನಾಳೆ ಎನ್ನದೇ ಬಿಜಾಪೂರ ಜಿಲ್ಲೆಯ ಜನಪದ ಕಲೆ, ಕಥಾಸಾಹಿತ್ಯ, ಕಲಾವಿದರ ನೆನಹುಗಳನ್ನು ಕಟ್ಟಿಕೊಡುವುದರ ಮೂಲಕ ಮಾಡಿ ತೋರಿಸಿದ್ದಾರೆ. ಅದನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ.

೫. ನಮ್ಮ ಸಂಸ್ಕೃತಿಯಲ್ಲಿ ಜನಪದರ ಆಚಾರಗಳು, ವಿಚಾರಗಳು, ನಂಬಿಕೆಗಳು ಮುಂತಾದ ಮೌಲ್ಯಗಳನ್ನು ಜನಪದ ಸಂಗ್ರಹಗಳಲ್ಲಿ ಗುರುತಿಸಿ ಅದಕ್ಕೊಂದು ವಿಶಿಷ್ಟ ಸೊಬಗನ್ನು ಕೊಟ್ಟಿದ್ದಾರೆ.

೬. ಜನಪದ ಸಂಗ್ರಹಗಳಲ್ಲಿ ಅಡಗಿರುವ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಆಯಾಮಗಳನ್ನು ತಲಸ್ಪರ್ಶಿಯಾಗಿ ವಿವೇಚಿಸಿ, ಭಿನ್ನ ಭಿನ್ನವಾದ ರೂಪಗಳಲ್ಲಿ ಕಟ್ಟಿಕೊಡುವ ಕಾರ್ಯ ಮಾಡಿದ್ದಾರೆ.

೭. ಇಲ್ಲಿರುವ ಸಂಗ್ರಹಗಳು ನಿರೂಪಣೆ ಮತ್ತು ಸಮೀಕ್ಷೆಗಳಿಗೆ ಸಮರ್ಪಕವಾಗಿವೆ. ನಿರೀಕ್ಷಿಸಿದ ಸತ್ಯನಿಷ್ಠೆ ಮತ್ತು ಸಮತೂಕದ ಸಮೀಕ್ಷೆಗಳು ಕಂಡು ಬರುತ್ತವೆ. ಯಾವುದೇ ಬಗೆಯ ಅವಹೇಳನೆಯಾಗಲಿ ಅತೀ ಪ್ರಶಂಸೆಯಾಗಲಿ ಇಲ್ಲ.

ಜನಪದ ಸಾಹಿತ್ಯ ಸಂಗ್ರಹದ ಮುಖಾಂತರ ಕನ್ನಡ ಸಾಹಿತ್ಯಕ್ಕೆ ಅನನ್ಯವಾದ ಅಪರೂಪದ ಕೊಡುಗೆ ನೀಡಿದ್ದಾರೆ. ಅವರ ಉತ್ತಮ ಗುಣಮಟ್ಟದ ಸಾಹಿತ್ಯ ಕಂಡು ಅನೇಕ ಪ್ರಶಸ್ತಿ, ಪುರಸ್ಕಾರಗಳು, ಗೌರವಾದರಗಳು ಸಲ್ಲಿವೆ. ಇವುಗಳ ಮುಖಾಂತರ ಸಾಹಿತ್ಯಿಕ ನ್ಯಾಯ ಸಂದಾಯವಾಗಿದೆ. ಅವರ ಈ ಅಪೇಕ್ಷಿತ ಸಾಹಿತ್ಯವನ್ನು ಅಧ್ಯಯನಿಸುವುದು, ಅಧ್ಯಯನದ ಮೂಲಕ ಮತ್ತಷ್ಟು ಸಾಹಿತ್ಯಿಕ ಗೌರವ ನ್ಯಾಯ ಒದಗಿಸುವುದು ಈ ಅಧ್ಯಯನದ ಪ್ರಮುಖ ಆಶಯವಾಗಿದೆ. ಇಷ್ಟೆಲ್ಲ ಸಾಹಿತ್ಯಿಕ ಕೆಲಸ ಕಾರ್ಯವನ್ನು ಮಾಡಿದ ಮತ್ತು ಮಾಡುತ್ತಿರುವ ಶ್ರೀಯುತ ಡಾ॥ ಎಂ.ಎನ್. ವಾಲಿಯವರ ಕಾರ್ಯ ಮೆಚ್ಚುವಂಥದ್ದು, ಪ್ರಶಂಶಿಸುವಂಥದ್ದು.

ಈ ಅಧ್ಯಯನದಲ್ಲಿ ಡಾ ॥ ಎಂ.ಎನ್. ವಾಲಿಯವರ ಜನಪದ ಸಂಗ್ರಹ ಸಂಪಾದನ ಕುರಿತು ಮಾತ್ರ ಅಧ್ಯಯನ ಕೈಗೊಳ್ಳಾಗಿದೆ. ಇನ್ನೂ ಅವರ ಸಮಗ್ರ ಸಾಹಿತ್ಯ ಕುರಿತು ಅನೇಕ ರೀತಿಯಲ್ಲಿ ಮುಂದಿನ ಅಧ್ಯಯನಕಾರರು ತಮ್ಮ ಅಧ್ಯಯನಗಳನ್ನು ಮುಂದುವರೆಸಬಹುದಾಗಿದೆ.

೧. ಡಾ ॥ ಎಂ.ಎನ್. ವಾಲಿಯವರ ಹಾಗೂ ಸಮಕಾಲೀನ ಸಂಪಾದನಾ ಸಾಹಿತ್ಯ.

೨. ಡಾ ॥ ಎಂ.ಎನ್. ವಾಲಿಯವರ ಸಂಪಾದನಾ, ಸಂಶೋಧನಾ ವಿಧಾನ.

೩. ಡಾ ॥ ಎಂ.ಎನ್. ವಾಲಿಯವರ ಪ್ರಾದೇಶಿಕತೆಯ ಅಧ್ಯಯನ ವಿಜಾಪೂರ ಜಿಲ್ಲೆಯ 'ಕಲೆ, ಕಲಾವಿದರು, ಕಥೆಗಾರರು' ಒಂದು ವಿವೇಚನೆ.

೪. ಡಾ॥ ಎಮ್.ಎನ್. ವಾಲಿಯವರ ಬಿಡಿ ಲೇಖನಗಳ ಅಧ್ಯಯನ.

ಜಾನಪದ ಸಂಗ್ರಹ, ಸಂಪಾದನ, ಪ್ರಕಟಣೆ ಹೀಗೆ ಹಲವಾರು ಕ್ಷೇತ್ರದಲ್ಲಿ ಡಾ॥ ಎಂ.ಎನ್. ವಾಲಿಯವರು ವೈಶಿಷ್ಟ್ಯಪೂರ್ಣವಾದ ಕಾರ್ಯ ಕೈಗೊಂಡಿದ್ದು, ಈಗಲೂ ಕೈಗೊಳ್ಳುತ್ತಿರುವುದು ಪ್ರಶಂಸನೀಯವಾಗಿದೆ. ಹೀಗೆ ವಿಭಿನ್ನ ಕ್ಷೇತ್ರಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಅವರು ಬರಹಗಾರರಾಗಿ, ಸಂಪಾದಕರಾಗಿ, ಸಂಘಟಕರಾಗಿ, ಪ್ರಕಟಕರಾಗಿ ಮಾಡಿದ ಕಾರ್ಯ ಶ್ಲಾಘನೀಯವಾದದ್ದು. ಡಾ ॥ ಎಂ.ಎನ್. ವಾಲಿಯವರ ಬಗ್ಗೆ, ಅವರ ಸಾಹಿತ್ಯದ ಬಗ್ಗೆ ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಿದ ಪ್ರಬಂಧ ಇದಾಗಿದೆ. ಕಾರಣ ವ್ಯಾಪ್ತಿಗೆ ಅನುಗುಣವಾಗಿ ಸಂಕ್ಷಿಪ್ತತೆಗೊಳಿಸಲಾಗಿದೆ.

ಇದೇ ರೀತಿ ಕನ್ನಡ ನಾಡಿನ ತುಂಬೆಲ್ಲ ಜನಪದ ಸಾಹಿತ್ಯ ಬಳಗ ಹಬ್ಬಿದೆ. ಅವರ ಸಾಹಿತ್ಯದ ಸಂಗ್ರಹ, ಸಂಪಾದನಾ ಸಾಹಿತ್ಯದ ವಿಭಿನ್ನ ಪ್ರಕಾರಗಳನ್ನು, ನೆಲೆಗಳನ್ನು ಅಧ್ಯಯನ ಮಾಡಲು ಅವಕಾಶವಿದೆ. ಡಾ ॥ ಎಂ.ಎನ್. ವಾಲಿಯವರ ಸಂಪಾದನಾ ಸಾಹಿತ್ಯ, ವಿಮರ್ಶಾ ಸಾಹಿತ್ಯ, ಸಂಶೋಧನಾ ಸಾಹಿತ್ಯ, ಲೇಖನ ಸಾಹಿತ್ಯ, ಉಪನ್ಯಾಸ ಸಾಹಿತ್ಯ, ಕಥಾಸಾಹಿತ್ಯ, ಚರಿತ್ರೆಗಳ ಸಾಹಿತ್ಯ ಇತ್ಯಾದಿ ಪ್ರತ್ಯೇಕವಾಗಿ ಅಧ್ಯಯನ ಕೈಗೊಳ್ಳಲು ಅವಕಾಶವಿದೆ. ಆಸಕ್ತರು ಅವುಗಳ ಅಧ್ಯಯನ ಕೈಗೊಳ್ಳಬಹುದಾಗಿದೆ.

# ಅನುಬಂಧಗಳು

೧. ಡಾ. ಎಂ.ಎನ್. ವಾಲಿಯವರ ಪರಿಚಯ ಹಾಗೂ ಪ್ರಮುಖ ಘಟನೆಗಳು

೨. ಡಾ. ಎಂ.ಎನ್. ವಾಲಿಯವರ ಪ್ರಶಸ್ತಿ ಸನ್ಮಾನಗಳು

೩. ಡಾ. ಎಂ.ಎನ್. ವಾಲಿಯವರ ಪ್ರಕಟಿತ ಸಾಹಿತ್ಯ

೪. ಪರಾಮರ್ಶನ ಗ್ರಂಥಗಳು

## ಅನುಬಂಧ – ೧

# ಪರಿಚಯ ಹಾಗೂ ಪ್ರಮುಖ ಘಟನೆಗಳು

### ಕಿರು ಪರಿಚಯ :

| | | |
|---|---|---|
| ಹೆಸರು | : | ಶ್ರೀ ಮಲ್ಲಿಕಾರ್ಜುನ ನಿಂಗಪ್ಪ ವಾಲಿ |
| ಊರು | : | ಸಾಲೋಟಗಿ ತಾ : ಇಂಡಿ, ಜಿ : ವಿಜಾಪೂರ |
| ಜನ್ಮ ದಿನಾಂಕ | : | ೧೦-೦೬-೧೯೩೫ |
| ವಿಳಾಸ | : | ಡಾ ॥ ಎಂ.ಎನ್. ವಾಲಿ, ಎಂ.ಎ., ಪಿ.ಎಚ್‌ಡಿ.,ಡಿಪ್-ಎಪಿ<br>ವಿಶ್ರಾಂತ ಪ್ರಾಚಾರ್ಯರು ಶಿವಯೋಗಿ ನಿಲಯ, ವಿದ್ಯಾನಗರ,<br>ಬಿ.ಎಲ್.ಡಿ ಆಸ್ಪತ್ರೆ ಎದುರು ರಸ್ತೆ, ವಿಜಾಪೂರ-೫೮೬ ೧೦೩ |

**ಶಿಕ್ಷಣ :**

| | | |
|---|---|---|
| ಎಸ್.ಎಸ್.ಸಿ. ೧೯೫೫ | : | ಶ್ರೀ ಶಾಂತೇಶ್ವರ ಹೈಸ್ಕೂಲ ಇಂಡಿ |
| ಬಿ.ಎ. ೧೯೬೭ | : | ದ್ವಿತೀಯ ವರ್ಗ, ಕಲಾ ಹಾಗೂ ವಿಜ್ಞಾನ ಕಾಲೇಜ, ಜಮಖಂಡಿ |
| ಶಾಸನದಲ್ಲಿ ಡಿಪ್ಲೋಮಾ ೧೯೭೦ | | ದ್ವಿತೀಯ ವರ್ಗ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ |
| ಎಂ.ಎ. ೧೯೭೦ | : | ಉನ್ನತ ದ್ವಿತೀಯ ವರ್ಗ ಕ.ವಿ.ವಿ. ಧಾರವಾಡ |
| ಪಿ.ಎಚ್‌ಡಿ | : | "ಸಿಂಪಿ ಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ "ಕ.ವಿ.ವಿ. ಧಾರವಾಡ |

**ಶೈಕ್ಷಣಿಕ ಸೇವೆ :**

| | | |
|---|---|---|
| ೦೧-೦೨-೧೯೬೦ ರಿಂದ | : | ೧೩-೦೭-೧೯೭೦ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವೆ |
| ೧೫-೦೭-೧೯೭೦ ರಿಂದ | : | ಉಪನ್ಯಾಸಕರು ಶಿವಾನಂದ ಕಾಲೇಜ, ಕಾಗವಾಡ |
| ೧೫-೦೬-೧೯೮೫ ರಿಂದ | : | ೩೦-೦೬-೧೯೮೯ ಪ್ರಾಚಾರ್ಯರು, ಶ್ರೀ ವ್ಯ.ಶಿ.ಸಂ.ಪದವಿ ಕಾಲೇಜು ಹಾರೂಗೇರಿ |
| ೩೦-೦೬-೧೯೯೩ ರಂದು | : | ಸೇವಾ ನಿವೃತ್ತಿ. |

**ಇತರ ಸೇವೆ :**

೧) ನೂರಾರು ಸಭೆ-ಸಮಾರಂಭ, ವಿಚಾರ ಸಂಕಿರ್ಣಗಳಲ್ಲಿ ಭಾಷಣ ಮತ್ತು ಪ್ರಬಂಧ ಮಂಡನೆ.

೨) ಧಾರವಾಡ ಆಕಾಶವಾಣಿಯಿಂದ ನುಡಿಮುತ್ತು, ಚಿಂತನ, ಸಂದರ್ಶನ, ಭಾಷಣಗಳು ಪ್ರಸಾರಗೊಂಡಿವೆ. ಅವರ ಕೆಲವು ಕೃತಿಗಳು ಪರಿಚಯ ಬಾನುಲಿಯಲ್ಲಿ ಮೂಡಿ ಬಂದಿವೆ.

೩) ದಿ : ೧೦-೦೫-೧೯೮೭ ರಿಂದ ೩೧-೦೫-೧೯೯೧ ರವರೆಗೆ (೪ ವರ್ಷ) ಧಾರವಾಡ ಆಕಾಶವಾಣಿ ಕೇಂದ್ರವಲ್ಲಿ ಜಾನಪದ ಸಂಗೀತ ವಿಭಾಗದ ಕಲಾವಿದರ ಆಯ್ಕೆ ಸಮೀತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೪) 'ಜಾನಪದ ಜಗತ್ತು' ಪತ್ರಿಕೆಯ ಮುಖಾಂತರ ಅನೇಕ ಲೇಖನಗಳು ಹಾಗೂ ಕಲಾವಿದರ ಪರಿಚಯ ಮಾಡಿಕೊಡಲಾಗಿದೆ.

೫) ಭುವನೇಶ್ವರಿ ಪ್ರಕಾಶನ ವಿಜಾಪುರ ಎಂಬ ಹೆಸರಿನ ಪ್ರಕಟನಾ ಸಂಸ್ಥೆಯನ್ನು ೧೯೮೦ ರಲ್ಲಿ ಪ್ರಾರಂಭಿಸಿ ಅದರ ಮುಖಾಂತರ ೪೮ ಕೃತಿಗಳನ್ನು ಪ್ರಕಟಿಸಿದ್ದಾರೆ.

೬) ೧೯೮೨ ರ ಏಪ್ರೀಲದಲ್ಲಿ ಗೋಕಾಕ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗಿಯಾಗಿ ಕನ್ನಡ ಪರ ಹೋರಾಟ ಮಾಡಿ ಸೆರೆಮನೆ ಶಿಕ್ಷೆ ಅನುಭವಿಸಿದ್ದಾರೆ.

೭) ೧೯೯೭ ರಿಂದ ೨೦೦೪ ರವರೆಗೆ ಬೆಂಗಳೂರಿನ ಕರ್ನಾಟಕ ಜಾನಪದ ಪರಿಷತ್ತಿನ ಆಡಳಿತ ಮಂಡಳಿಯ ಟ್ರಸ್ಟಿಯಾಗಿ, ೧೯೯೮ ರಿಂದ ೨೦೦೬ ರವರೆಗೆ ಸರಕಾರಿ ಕ.ಗಂ. ನಂ.೪೩ ಶಾಲೆಯ ಆಡಳಿತ ಮಂಡಳಿಯ ಅಧ್ಯಕ್ಷನಾಗಿ ಸೇವೆ ಸಲ್ಲಿಸಿದ್ದಾರೆ. ೧೯೯೬ ರಿಂದ ವಿಜಾಪೂರ ಜಿಲ್ಲಾ ನಾಗರೀಕ ವೇದಿಕೆಯ ಅಧ್ಯಕ್ಷನಾಗಿ ೧೯೯೬ ರಿಂದ ಉತ್ತರ ಕರ್ನಾಟಕ ಅಭಿವೃದ್ಧಿ ಹೋರಾಟ ಸಮಿತಿಯ ಕಾರ್ಯದರ್ಶಿಯಾಗಿ, ೨೦೦೧ ರಿಂದ ಜಾನಪದ ಕಲಾ ಕೇಂದ್ರದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಅನುಬಂಧ-೨

## ಪಡೆದ ಪ್ರಶಸ್ತಿ ಸನ್ಮಾನಗಳು

೧. ಯುವಜನ ಸೇವಾ ಸಂಘ ವಿಜಾಪೂರ ಇವರಿಂದ ೧೯೮೯ ರಲ್ಲಿ "ಆದರ್ಶ ಶಿಕ್ಷಕ" ಪ್ರಶಸ್ತಿ ಬಂದಿದೆ.

೨. ಜಾನಪದ ಪ್ರತಿಭಾ ಪ್ರಕಾಶನ ಗೊಳಸಂಗಿ ಅವರು ದಿನಾಂಕ : ೦೪-೦೩-೧೯೯೫ ರಂದು ಅವರ ಷಷ್ಟ್ಯಬ್ದಿ ನಿಮಿತ್ತ ಸತ್ಕಾರಮಾಡಿ "ಸಾಹಿತ್ಯ ಸಂಪನ್ನ" ಎಂಬ ಸನ್ಮಾನ ಪತ್ರ ನೀಡಿದ್ದಾರೆ.

೩. ದಿನಾಂಕ : ೦೧-೧೧-೧೯೯೫ ರಂದು ಕರ್ನಾಟಕ ಸರಕಾರದ ರಾಜ್ಯೋತ್ಸವ ಸಮಿತಿ ವಿಜಾಪೂರ ಅವರಿಂದ ಪ್ರಶಸ್ತಿ ಪತ್ರ ಸಹಿತ ಸನ್ಮಾನ.

೪. ಬಸವ ಕೇಂದ್ರ ವಿಜಾಪೂರ ಇವರಿಂದ ದಿನಾಂಕ : ೧೦-೦೫-೧೯೯೮ ರಂದು "ಬಸವ ಧರ್ಮ ಚಿಂತಕರು" ಎಂಬ ಪ್ರಶಸ್ತಿ ಪತ್ರ ಸಹಿತ ಸನ್ಮಾನ.

೫. ೧೯೯೯-"ಜಾನಪದ ತಜ್ಞ" ಪ್ರಶಸ್ತಿ ಸಹಿತ ಬೆಂಗಳೂರಲ್ಲಿ ಶ್ರೀಮತಿ ಗಂಗೂಬಾಯಿ ಹಾನಗಲ್ ಅವರಿಂದ ಸನ್ಮಾನ.

೬. ದಿ : ೨೪-೦೬-೨೦೦೭ ರಂದು ಬೀಳಗಿಯ ಸುರಗೀಮಠ ಪ್ರತಿಷ್ಠಾನದಿಂದ "ಸುವರ್ಣ ಕನ್ನಡಿಗ" ರಾಜ್ಯ ಪ್ರಶಸ್ತಿ ಬಂದಿದೆ.

೭. ದಿ : ೧೯-೦೯-೨೦೦೭ ರಂದು ಆಪೇರಿಯ ಸಂಸ್ಥೆಯಿಂದ "ಬಸವಜ್ಯೋತಿ" ರಾಜ್ಯಪ್ರಶಸ್ತಿ ಬಂದಿದೆ.

## ಅನುಬಂಧ-೩

## ಪ್ರಕಟಿತ ಸಾಹಿತ್ಯ

| ಕ್ರಸಂ. | ಕೃತಿಯ ಹೆಸರು | ಪ್ರಕಟನಾ ಸಂಸ್ಥೆ | ವರ್ಷ |
|---|---|---|---|
| ೧ | ಷಡಕ್ಷರದೇವ ಕವಿಯ ರಾಜಶೇಖರ ವಿಳಾಸ | ಕ.ವಿ.ವಿ.ದ. ಉಪನ್ಯಾಸ ಗ್ರಂಥ | ೧೯೭೪ |
| ೨ | ಆನಪದ ಸಾಹಿತ್ಯದಲ್ಲಿ ನೀತಿ | ಕ.ವಿ.ವಿ.ದ. ಉಪನ್ಯಾಸ ಗ್ರಂಥ | ೧೯೭೮ |
| ೩ | ಶುಭೋದಯ (ಕವನ ಸಂಕಲನ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೦ |
| ೪ | ಶ್ರೀ ಮರಿ ಮಹಾರಾಜರು (ಚರಿತ್ರೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೧ |
| ೫ | ಮುತ್ತಿನ ತೆನೆ (ಕಥಾ ಸಂಕಲನ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೧ |
| ೬ | ಶ್ರೀ ಮರಿ ಮಹಾರಾಜರು (ಮರಾಠಿ ಆವೃತ್ತಿ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೨ |
| ೭ | ಡಂಗುರ ಪದಗಳು (ಸಂಪಾದನೆ) | ವೀರಶೈವ ಅಧ್ಯಯನ ಸಂಸ್ಥೆ, ಗದಗ | ೧೯೮೨ |
| ೮ | ಜನಪದ ಜೀವನ ತರಂಗಗಳು (ತ್ರಿಪದಿಗಳು) | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು | ೧೯೮೨ |
| ೯ | ಶರಣ ಅಜಗಣ್ಣ (ಮಕ್ಕಳಿಗಾಗಿ ಚರಿತ್ರೆ) | ಹುಬ್ಬಳ್ಳಿ ೩೦೦೦ ಮಠದ ಗ್ರಂಥಮಾಲೆ | ೧೯೮೨ |
| ೧೦ | ಸಿರಿಗನ್ನಡ ಒಡಮುಗಳು (ಸಂಪಾದನೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೪ |
| ೧೧ | ಹಬ್ಬಗಳ ಜನಪದ ಹಾಡುಗಳು | ಕ.ವಿ.ವಿ.ದ. ಉಪನ್ಯಾಸ ಗ್ರಂಥ | ೮೫,೯೧,೦೩ |
| ೧೨ | ಜಾನಪದ ಒಗಟುಗಳು (ಸಂಪಾದನೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೬ |
| ೧೩ | ಅಥಣಿ ತಾಲೂಕು ದರ್ಶನ | ಐ.ಬಿ.ಎಚ್. ಪ್ರಕಾಶನ ಬೆಂಗಳೂರು | ೮೬,೯೨,೦೩ |
| ೧೪ | ಶರಣ ಸ್ಮೃತಿ (ಸಂ.) ಜಾನಪದ ಹಾಡುಗಳು | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೭ |
| ೧೫ | ನಾಟ್ಯಾನಂದ ನೀಲು ಮಾಸ್ತರರು (ಚರಿತ್ರೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೮೮ |
| ೧೬ | ತೆಲಸಂಗದ ಶ್ರೀಗಂಧ (ಸಂಪಾದನೆ) | ಬಸವ ಪುರಾಣ ಸಮಿತಿ ತೆಲಸಂಗ | ೧೯೮೯ |
| ೧೭ | ಸಿಂಪಿ ಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ ಪಿ.ಎಚ್.ಡಿ. ಮಹಾಪ್ರಬಂಧ | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೦ |
| ೧೮ | ನನ್ನ ಭೂಮಿ (ಸಂಪಾದಿತ ನಾಟಕ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೧ |
| ೧೯ | ಜಾನಪದ ಜೀವಾಳ | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೨,೯೭ |
| ೨೦ | ಶಿವಶರಣ ಮೇದಾರ ಕೇತಯ್ಯ | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೩ |
| ೨೧ | ಶರಣ ಕಿರಣ | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೪ |
| ೨೨ | ಡಾ. ಸಿಂಪಿ ಲಿಂಗಣ್ಣ – ಜೀವನ ಸಾಧನೆ | ಕರ್ನಾಟಕ ಜಾನಪದ ಅಕಾಡೆಮಿ | ೧೯೯೪ |
| ೨೩ | ದುಂಡು ಮಲ್ಲಿಗಿ ಹೂವ ಬುಟ್ಟಿಲಿ ಬಂದಾವ (ಸಂ.) | ಕರ್ನಾಟಕ ಜಾನಪದ ಪರಿಷತ್ತು ಬೆಂಗಳೂರು | ೧೯೯೫ |
| ೨೪ | ನಮ್ಮ ಒಕ್ಕಲಿಗರ ನಂಬಿಕೆಗಳು | ಕ.ವಿ.ವಿ. ಉಪನ್ಯಾಸ ಗ್ರಂಥ | ೧೯೯೬ |
| ೨೫ | 'ನಂದಾದೀಪ' ಶತಮಾನೋತ್ಸವದ ನೆನಪಿನ ಸಂಪುಟ (ಸಂಪಾದನೆ) | ಶ್ರೀ ಸಿದ್ದೇಶ್ವರ ಸಂಸ್ಥೆ ಬಿಜಾಪೂರ | ೧೯೯೮ |
| ೨೬ | ಚಿನ್ಮಯ ಚಿಂತಾಮಣಿ | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೮ |
| ೨೭ | ಕರ್ಮಯೋಗಿ ಆರ್.ಎಸ್. ನಾವದಗಿ (ಚರಿತ್ರೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೧೯೯೮ |
| ೨೮ | ಲೇಖನ ಸಂಪದ (ಆಯ್ದ ಲೇಖನಗಳು) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೦ |
| ೨೯ | ಶತಮಾನದ ಶಿವಯೋಗಿ (ಸಂ) | ಶ್ರೀ ಸಿದ್ದೇಶ್ವರ ಸಂಸ್ಥೆ ಬಿಜಾಪೂರ | ೨೦೦೦ |
| ೩೦ | ಚಿಂತನ ಪ್ರಭೆ (ರೇಡಿಯೋ ಚಿಂತನಗಳು) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೩ |
| ೩೧ | ಬಸವಾದಿ ಶಿವಶರಣ ೧೦೮ ವಚನಗಳು (ಸಂ.) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೩ |
| ೩೨ | ವಾಲಿ ಬಸಪ್ಪ ಮಾಸ್ತರರು (ಚರಿತ್ರೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೩ |
| ೩೩ | ಸಂತೃಪ್ತಿ (ಸಾರಂಗಮಠ ಹಂಪಯ್ಯ ಅಭಿನಂದನಾ ಗ್ರಂಥ) | ಅಭಿನಂದನಾ ಸಮಿತಿ ಬಿಜಾಪೂರ | ೨೦೦೪ |
| ೩೪ | ವಚನ ದರ್ಪಣ (ಡಾ. ದ.ರಾ. ಬೇಂದ್ರೆ ಪ್ರಶಸ್ತಿ ಪುರಸ್ಕೃತ ಕೃತಿ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೪ |
| ೩೫ | ಆಯ್ದ ಗಾದೆಗಳು (ಸಂ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೫ |

| | | | |
|---|---|---|---|
| ೩೬ | ಮಹಾಂತ<br>(ಎಂ.ಎಂ. ಹುಂಡೇಕಾರ ಅಭಿನಂದನ ಗ್ರಂಥ) | ಅಭಿನಂದನಾ ಸಮೀತಿ ಬಿಜಾಪೂರ | ೨೦೦೫ |
| ೩೭ | ಹಿತವಂಚಕ<br>(ಜಿ.ಎಂ. ವಾರದ ಅಭಿನಂದನ ಗ್ರಂಥ | ಅಭಿನಂದನಾ ಸಮೀತಿ ಬಿಜಾಪೂರ | ೨೦೦೫ |
| ೩೮ | ಕೃಷಿ ಜಾನಪದ | ಕ.ಸಾ.ಪ. ಬೆಂಗಳೂರು | ೨೦೦೬ |
| ೩೯ | ಹೊಂಬಿಸಿಲು (ಕವನ ಸಂಕಲನ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೬ |
| ೪೦ | ಹುಟ್ಟು ಹೋರಾಟಗಾರ (ಚರಿತ್ರೆ) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೭ |
| ೪೧ | ಬೆಳಕು ಶೀ ಸಂಗಮೇಶ್ವರ ಶಿ. ಸಂಸ್ಥೆಯ<br>ಬೆಳ್ಳಿಹಬ್ಬದ ಸಂಸ್ಕರಣ ಸಂಪುಟ | ಸಂಗಮೇಶ್ವರ ಸಂಸ್ಥೆ ಬಿಜಾಪೂರ | ೨೦೦೭ |
| ೪೨ | ತೆಲಸಂಗದ ಶೀ ಬಸವಲಿಂಗ ಸ್ವಾಮಿಗಳು | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೭ |
| ೪೩ | ಶರಣೆ ಶಾಂತಪ್ಪ ಮಿರ್ಜಿ (ಸಂ.) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೭ |
| ೪೪ | ಗಜಲ್ ಸ್ಪಂದನ (ಸಂ.) | ಸ್ಪಂದನ ಬಳಗ ವಿಜಾಪೂರ | ೨೦೦೭ |
| ೪೫ | ವಿಜಾಪುರ ಜಿಲ್ಲೆಯ ಜನಪದ ಕಲಾವಿದರು | ಜಾನಪದ ಅಕಾಡೆಮಿ ಬೆಂಗಳೂರು | ೨೦೦೮ |
| ೪೬ | ಸಾವಿರದ ಜನಪದ ಗೀತೆಗಳು (ಸಂ.) | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೮ |
| ೪೭ | ಚಂದ್ರಹಾಸ ವಿಜಯ ಹಾಗೂ ಇತರ ನಾಟಕಗಳು | ಭುವನೇಶ್ವರಿ ಪ್ರಕಾಶನ, ವಿಜಾಪೂರ | ೨೦೦೮ |
| ೪೮ | ವಿಜಾಪೂರ ಜಿಲ್ಲೆಯ ಜನಪದ ಕಲೆಗಳು | ಜಾನಪದ ಅಕಾಡೆಮಿ ಬೆಂಗಳೂರು | ೨೦೦೮ |

## ಅನುಬಂಧ–೪
## ಪರಾಮರ್ಶನ ಗ್ರಂಥಗಳು


೧) ಕನ್ನಡ ಸಾಹಿತ್ಯ ಕೋಶ – ರಾಜಪ್ಪ ದಳವಾಯಿ

೨) ಪುರಾಣ ಜಾನಪದ ಮತ್ತು ದೇಶೀವಾದ – ಡಾ. ಅರವಿಂದ ಮಾಲಗತ್ತಿ

೩) ಜಾನಪದ ಸ್ವರೂಪ ಮತ್ತು ಸಾಹಿತ್ಯ – ಪ್ರೊ.ಡಿ.ಲಿಂಗಯ್ಯ, ಡಾ. ಕೆ.ಆರ್. ಸಂಧ್ಯಾರೆಡ್ಡಿ

೪) ಸಾಲುಸಂಪಿಗೆ ನೆರಳು – ಪ್ರೊ. ಕಾಳೇಗೌಡ ನಾಗವಾರ, ಜಿ.ವಿ. ಆಂದನ ಮೂರ್ತಿ

೫) ನವೋದಯ ಕಾವ್ಯದ ಮೇಲೆ ಜಾನಪದ ಪ್ರಭಾವ – ಡಾ. ಪ್ರಕಾಶ ಗ. ಖಾಡೆ

೬) ಜಾನಪದ ವ್ಯಾಸಂಗ – ಅರವಿಂದ ಮಾಲಗತ್ತಿ

೭) ವಿಶಿಷ್ಟ ಜಾನಪದ – ಡಾ ॥ ಎಚ್. ತಿಪ್ಪೇರುದ್ರಸ್ವಾಮಿ

೮) ಜಾನಪದ ಸಂಭಾವನೆ – ಡಾ ॥ ಡಿ.ಕೆ. ರಾಜೇಂದ್ರ ನೀ, ಗಿರಿಗೌಡ

೯) ಶರಣರ ಅನುಭಾವ ಸಾಹಿತ್ಯ – ಡಾ. ಎಚ್. ತಿಪ್ಪೆರುದ್ರಸ್ವಾಮಿ

೧೦) ಬ.ಗಿ. ಯಲ್ಲಟ್ಟಿ : ಸಮಗ್ರ ಸಾಹಿತ್ಯ – ಡಾ. ಆರ್.ಬಿ. ಚಿಲಮಿ

೧೧) ಹೆಸರ ಹೇಳ್ತೀನಿ ಒಡಪಕಟ್ಟ – ಜ್ಯೋತಿ ಹೊಸೂರ

೧೨) ಜಾನಪದ ಉಪಾಸನೆ – ಜ್ಯೋತಿ ಹೊಸೂರ

೧೩) ಜಾನಪದ ಒಗಟು ಮತ್ತು ಗಾದೆಯ ಕಥೆಗಳು – ಜೀನಹಳ್ಳಿ ಸಿದ್ದಲಿಂಗಪ್ಪ

೧೪) ಜಾನಪದ ಸಾಹಿತ್ಯ ದರ್ಶನ – ಡಾ. ಎಸ್. ವೃಷಭೇಂದ್ರಸ್ವಾಮಿ

೧೫) ವಚನ ಸಾಹಿತ್ಯ – ಎ. ಚಂದ್ರಶೇಖರ ನಂಗಲಿ

೧೬) ನಮ್ಮ ಗಾದೆಗಳು – ಡಾ. ರಾಮೇಗೌಡ

೧೭) ಜನಪದ ಸಿರಿ – ಡಾ. ಆರ್.ಬಿ. ಚಿಲಮಿ

೧೮) ಜನ ಜಾನಪದ – ಡಾ. ಮಂಜುನಾಥ ಬೇವಿನಕಟ್ಟಿ

೧೯) ಗಾದೆಗಳು – ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

೨೦) ಬಯಲಾಟ (ಅಲ್ಲಮ ಪ್ರಭು) – ಡಾ. ಎಂ.ಎಸ್. ಸುಂಕಾಪೂರ

೨೧) ನಮ್ಮ ಹಳ್ಳಿಯ ಜನಪದ ಕಥೆಗಳು – ನಗುವನಹಳ್ಳಿ ಪಿ. ರತ್ನ

೨೨) ಸಿಂಪಿ ಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ – ಡಾ. ಎಂ.ಎನ್. ವಾಲಿ

೨೩) ಜನಪದ ಆಟಗಳು – ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

೨೪) ಶ್ರೀಕೃಷ್ಣ ಸಂಧಾನ – ಡಾ.ಎಂ.ಎಸ್. ಸುಂಕಾಪೂರ

೨೫) ನಮ್ಮ ಜನಪದ ಕಥೆಗಳು – ಹಿ.ಶಿ. ರಾಮಚಂದ್ರಗೌಡ

೨೬) ಸುಗ್ಗಿ – ಬೆಸಗರಹಳ್ಳಿ ರಾಮಣ್ಣ

೨೭) ಆಯ್ದ ಜನಪದ ಒಗಟುಗಳು – ಡಾ. ಸೋಮಶೇಖರ ಇಮ್ರಾಪೂರ

೨೮) ಜಾನಪದ ವಿಹಾರ – ಕ್ಯಾತನಹಳ್ಳಿ ರಾಯಣ್ಣ

೨೯) ಹೊಳಸಾಲಬಳ್ಳಿ – ಶ್ರೀರಾಮ ಇಟ್ಟಣ್ಣವರ

೩೦) ದಾಳಿಂಬೆ ರಾಣಿ ಮತ್ತು ಇತರ ಕಥೆಗಳು – ಟಿ.ಎಸ್. ರಾಜಪ್ಪ

೩೧) ಜನಪದ ಸಾಹಿತ್ಯದಲ್ಲಿ ನೀತಿ – ಡಾ. ಎಂ.ಎನ್. ವಾಲಿ

೩೨) ಸಾಹಿತ್ಯ ವಿಮರ್ಶೆ – ಸಿ.ಎನ್. ರಾಮಚಂದ್ರನ್

೩೩) ಆನಪದ ಸಾಹಿತ್ಯ ದರ್ಶನ – ಎಂ.ಎಸ್. ಸುಂಕಾಪೂರ

